# ಲಂಕೇಶರ ಟೀಕೆ-ಟಿಪ್ಪಣಿಗಳಲ್ಲಿ : 'ಕನ್ನಡ ಸಂಸ್ಕೃತಿಯ ವಿಮರ್ಶೆ'

*ಹಂಪಿ ವಿಶ್ವವಿದ್ಯಾಲಯಕ್ಕೆ ಎಂ.ಫಿಲ್ ಪದವಿಗಾಗಿ ಸಲ್ಲಿಸಿದ*

**ನಿಬಂಧ**

ಮಾರ್ಗದರ್ಶಕರು :
**ಡಾ. ಚಂದ್ರಶೇಖರ ನಂಗಲಿ**

ಸಂಶೋಧನಾ ವಿದ್ಯಾರ್ಥಿ :
**ನಾಗರಾಜಯ್ಯ ಕೆ.**



**ಪ್ರೊ. ಕಿ.ರಂ. ನಾಗರಾಜ್**
ನಿರ್ದೇಶಕರು, ಕಾವ್ಯ ಮಂಡಲ
ಹಂಪಿ ಕನ್ನಡ ವಿಶ್ವವಿದ್ಯಾನಿಲಯದಿಂದ ಮಾನ್ಯತೆ ಪಡೆದಿದೆ.

೨೦೦೭

605

# ಮಾರ್ಗದರ್ಶಕರ ಪ್ರಮಾಣ ಪತ್ರ

**ನಾಗರಾಜಯ್ಯ ಕೆ.** ಇವರು **"ಲಂಕೇಶರ ಟೀಕೆ-ಟಿಪ್ಪಣಿಗಳಲ್ಲಿ: 'ಕನ್ನಡ ಸಂಸ್ಕೃತಿಯ ವಿಮರ್ಶೆ'"** ಎಂಬ ಶೀರ್ಷಿಕೆಯ ಈ ಎಂ.ಫಿಲ್ ನಿಬಂಧವನ್ನು ನನ್ನ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿರುತ್ತಾರೆ. ಹಂಪಿ ಕನ್ನಡ ವಿಶ್ವವಿದ್ಯಾಲಯದ ಎಂ.ಫಿಲ್ ಪದವಿಗಾಗಿ ಸಲ್ಲಿಸುತ್ತಿರುವ ಪ್ರಸ್ತುತ ನಿಬಂಧವನ್ನು ಈ ಮೊದಲು ಬೇರೆ ಯಾವುದೇ ವಿಶ್ವವಿದ್ಯಾಲಯದ ಯಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲವೆಂದು ಈ ಮೂಲಕ ಪ್ರಮಾಣೀಕರಿಸುತ್ತೇನೆ.

ಮಾರ್ಗದರ್ಶಕರು
**ಡಾ. ಚಂದ್ರಶೇಖರ ನಂಗಲಿ**

ಡಿ. ಚಂದ್ರಶೇಖರ ನಂಗಲಿ
ಕನ್ನಡ ವಿಭಾಗ ಮುಖ್ಯಸ್ಥರು,
ಸರ್ಕಾರಿ ಬಾಲಕರ ಕಾಲೇಜು,
ಕೋಲಾರ-563 101.

ದಿನಾಂಕ : ೨೮/೦೨/07
ಸ್ಥಳ : ಬೆಂಗಳೂರು

**ಅಧ್ಯಯನ ಕೇಂದ್ರ :** ಕಾವ್ಯಮಂಡಲ,
೧೩/೮೫, ರಾಷ್ಟ್ರೀಯ ವಿದ್ಯಾಲಯ ರಸ್ತೆ, ಬಸವನಗುಡಿ,
ಬೆಂಗಳೂರು-೫೬೦ ೦೦೪.

605

# ದೃಢೀಕರಣ ಪತ್ರ

**"ಲಂಕೇಶರ ಟೀಕೆ-ಟಿಪ್ಪಣಿಗಳಲ್ಲಿ: 'ಕನ್ನಡ ಸಂಸ್ಕೃತಿಯ ವಿಮರ್ಶೆ'"** ಎಂಬ ಶೀರ್ಷಿಕೆಯ ಈ ಮಹಾಪ್ರಬಂಧವನ್ನು ಎಂ.ಫಿಲ್ ಪದವಿಗಾಗಿ ಹಂಪಿ ಕನ್ನಡ ವಿಶ್ವವಿದ್ಯಾನಿಲಯಕ್ಕೆ ಸಲ್ಲಿಸಲು **ಡಾ. ಚಂದ್ರಶೇಖರ ನಂಗಲಿ** ಅವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಲಾಗಿದೆ. ಪ್ರಸ್ತುತ ನಿಬಂಧವನ್ನು ಈ ಮೊದಲು ಯಾವುದೇ ವಿಶ್ವವಿದ್ಯಾಲಯದ ಯಾವುದೇ ಪದವಿಗಾಗಿ ಬಳಸಿಕೊಂಡಿರುವುದಿಲ್ಲ ಎಂದು ಈ ಮೂಲಕ ದೃಢೀಕರಿಸುತ್ತೇನೆ.

ದಿನಾಂಕ : ೨೫/೦೯/೦೭
ಸ್ಥಳ : ಬೆಂಗಳೂರು

ಸಂಶೋಧಕ
**(ನಾಗರಾಜಯ್ಯ ಕೆ.)**

**ಅಧ್ಯಯನ ಕೇಂದ್ರ :** ಕಾವ್ಯಮಂಡಲ,
೧೩/೮೫, ರಾಷ್ಟ್ರೀಯ ವಿದ್ಯಾಲಯ ರಸ್ತೆ, ಬಸವನಗುಡಿ,
ಬೆಂಗಳೂರು-೫೬೦ ೦೦೪.

# ಅಧ್ಯಾಯಗಳ ವಿಭಾಗೀಕರಣ

ಅಧ್ಯಾಯ-೧

# ಪ್ರಸ್ತಾವನೆ

ಲಂಕೇಶರು ಪುರಾಣಗಳ ಬಗ್ಗೆ ಹೆಚ್ಚು ಮಾತನಾಡುವುದಿಲ್ಲ. ಸ್ಪಷ್ಟವಾದ ಸಮಕಾಲೀನ ರಾಜಕಾರಣದ ಹಿನ್ನೆಲೆಯಲ್ಲಿ ಸಂಗತಿಗಳನ್ನು ನೋಡುತ್ತಾ ಹೋಗುತ್ತಾರೆ. 'ವೈಯಕ್ತಿಕವೂ, ರಾಜಕೀಯವೇ ಎಂಬುದು ಆಧುನಿಕ ಕಾಲದ ತಿಳುವಳಿಕೆ. ಪ್ರಜಾಪ್ರಭುತ್ವವಿರುವ ದೇಶಗಳಲ್ಲಂತೂ ಈ ಮಾತು ಅಕ್ಷರಶಃ ಸತ್ಯ. ಈ ಹಿನ್ನೆಲೆಯಲ್ಲಿ ಲಂಕೇಶರ ವೈಚಾರಿಕ ಬರವಣಿಗೆಗೆ ಮಹತ್ವವಿದೆ. ಲಂಕೇಶರು ಎಂಬತ್ತರ ದಶಕದಲ್ಲಿ ಪತ್ರಿಕೆಯನ್ನು ಆರಂಭಿಸಿದ ಮೇಲೆ ಸಮಕಾಲೀನ ರಾಜಕಾರಣವನ್ನು ಚಿಕಿತ್ಸಕ ದೃಷ್ಟಿಕೋನದಿಂದ ಪರಿವೀಕ್ಷಿಸಿದ್ದು, ಅನಂತರ ಪ್ರಪ್ರಥಮ ಕಾಂಗ್ರೆಸ್ಸೇತರ ಸರ್ಕಾರ ಕರ್ನಾಟಕದಲ್ಲಿ ಅಸ್ತಿತ್ವಕ್ಕೆ ಬರಲು ಪತ್ರಿಕೆ ವಹಿಸಿದ ಪಾತ್ರ ಈಗ ಇತಿಹಾಸ. ಈ ಹಿನ್ನೆಲೆಯಲ್ಲಿ ಲಂಕೇಶರ ಚಿಕಿತ್ಸಕ ನೋಟ ಸಮಕಾಲೀನ ರಾಜಕೀಯ ವ್ಯವಸ್ಥೆಯನ್ನು ಯಾವ ರೀತಿ ಮಾರ್ಪಡಿಸಲು ಬಯಸುತ್ತಿತ್ತು ಎಂಬುದು ಕುತೂಹಲಕಾರಿಯಾದುದು. ಪತ್ರಿಕೆಯಲ್ಲಿ ಅವರು ಬರೆದ ಲೇಖನಗಳು ಒಂದು ಕಡೆ ಬುದ್ಧಿ ಜೀವಿಯ ಆತಂಕ, ಕನಲಿಕೆ, ಪ್ರೀತಿ ಮತ್ತು ಚೈತನ್ಯವನ್ನು ವ್ಯಕ್ತಪಡಿಸುತ್ತವೆ. ಈ ಭಾವನೆಗಳ ಹಿಂದೆ ಲಂಕೇಶರ ಸಾಮಾಜಿಕ ಸಾಂಸ್ಕೃತಿಕ ಜವಾಬ್ದಾರಿಗಳು ಕೆಲಸ ಮಾಡಿವೆ. ಅವರ ಈ ಭಾವನೆಗಳ ಹಿಂದೆ ವೈಯಕ್ತಿಕತೆಯ ಖದರ್ ಇದ್ದರೂ ಅದು ಒಂದು ಸಾಮೂದಾಯಿಕ ಪ್ರಜ್ಞೆಯ ಅಭಿವ್ಯಕ್ತಿಯಾಗಿಯೂ ಮೂಡಿ ಬಂದಿದೆ. ಇಲ್ಲಿ ವೈಯಕ್ತಿಕ ಆಸೆ ನಿರಾಸೆಗಳಿಗಿಂತ ಸಾಮಾಜಿಕ ಆಸೆ ನಿರಾಸೆಗಳಂತೆ ಹೆಚ್ಚಿನ ಪಾಲು, ಅವರ ಟೀಕೆ-ಟಿಪ್ಪಣಿಗಳಲ್ಲಿ ಹಾಗೂ ಪ್ರಜಾವಾಣಿ ಪತ್ರಿಕೆಯಲ್ಲಿ ಪ್ರಕಟವಾದ ಅಂಕಣ ಬರಹಗಳಲ್ಲಿ ಇರುವ ರಾಜಕೀಯ ಪ್ರಜ್ಞೆ ಯಾವ ರೀತಿಯದ್ದು ಅದರ ವಿಭಿನ್ನ ಆಯಾಮುಗಳು ಯಾವುವು ಇವುಗಳನ್ನು ಕಂಡುಕೊಳ್ಳುವಾಗ ಅದರ ಹಿಂದಿನ ಸಾಂಸ್ಕೃತಿಕ ಆಯಾಮುಗಳನ್ನು ಅನಾವರಣಗೊಳಿಸುವ ಉದ್ದೇಶ ನನ್ನ ಅಧ್ಯಯನದ ಹಿಂದಿದೆ.

ಎಂಬತ್ತರ ದಶಕದಿಂದ ರಾಜಕಾರಣವು ಅನೇಕ ಹಂತಗಳಲ್ಲಿ ಹೊಸ ಬದಲಾವಣೆಯನ್ನು ಹಾಗೆಯೇ ಹೊಸ ಹೊಸ ಸಮಸ್ಯೆಗಳನ್ನು ಹುಟ್ಟಿಹಾಕುತ್ತಾ ತನ್ನ ದಾರಿಯಲ್ಲಿ ನಡೆಯುವ ಸಂದರ್ಭದಲ್ಲಿ ಲಂಕೇಶರು ತಮ್ಮ ಸಾಹಿತ್ಯದ ಮೂಲಕ ಈ ಹೊಸ ಬದಲಾವಣೆಗೆ ಪ್ರತಿಕ್ರಿಯಿಸುತ್ತಾ ಸಾಗಿದವರು. ತನ್ನ ಸಮಕಾಲೀನ ರಾಜಕೀಯ ವ್ಯವಸ್ಥೆಯನ್ನು ವ್ಯಂಗ್ಯ ಮತ್ತು ವಿಷಾದ. ಹಿನ್ನೆಲೆಯಲ್ಲಿ ಅರ್ಥೈಸಿರುವ ಇವರ ವಿದ್ವತ್ತು ವಿಶಿಷ್ಟವಾದುದು. ಟೀಕೆ-ಟಿಪ್ಪಣಿ ಸಂಪುಟಗಳಿಗೆ ಪ್ರಸ್ತಾವನೆಯನ್ನು ಬರೆಯುತ್ತಾ ನಟರಾಜ್ ಹುಳಿಯಾರರು ಹೇಳಿರುವ ಮಾತುಗಳು ಹೆಚ್ಚು ಸೂಕ್ತವಾದವುಗಳು. "ಲಂಕೇಶರನ್ನು ಜನ ಮೇಷ್ಟ್ರು ಎಂದು ಕರೆಯುವುದು

ಸುಮ್ಮನೆ ಅಲ್ಲ. ಅವರ ಬರವಣಿಗೆಯಲ್ಲಿ ಮೇಷ್ಟರ ಗತ್ತು. ಉಪದೇಶದ ಧ್ವನಿ, ಬುದ್ಧಿ ಜೀವಿಯ ಆತಂಕ ನಾಯಕನ ಜವಾಬ್ದಾರಿ ಹುಡುಕಾಟ ಎಲ್ಲವೂ ಇರುವುದು ಈ ಟೀಕೆ-ಟಿಪ್ಪಣಿಗಳ ಓದುಗರಿಗೆಲ್ಲ ಗೊತ್ತು ಹಾಗೆಯೇ ಅವರ ನಿಲುವುಗಳು ಕಾಲ-ಕಾಲಕ್ಕೆ ಬದಲಾಗುವ ರೀತಿಯೂ ಅವರ ಓದುಗರಿಗೆಲ್ಲ ಪರಿಚಯವಿದೆ. ಗುಂಡೂರಾಯರು ಅಧಿಕಾರದಲ್ಲಿರುವಷ್ಟು ಕಾಲ ಅವರನ್ನು ಕಟುವಾಗಿ ಟೀಕಿಸಿದ ಗೇಲಿ ಮಾಡಿದ ಲಂಕೇಶರು ಗುಂಡೂರಾಯರು ಅಧಿಕಾರ ಕಳೆದುಕೊಂಡಾಗ ಬರೆದ ಟೀಕೆ-ಟಿಪ್ಪಣಿ ಖಳನೊಬ್ಬ ಉರುಳಿಬಿದ್ದಾಗ ಅವನನ್ನು ನೋಡಬೇಕಾದ ರೀತಿಗೆ ಆದರ್ಶ ಮಾದರಿಯಂತಿದೆ. ಸದಾ ಬೆಳೆವ ಲೇಖಕನೊಬ್ಬ ತನ್ನ ನಿಲುವುಗಳನ್ನು ತಾನೇ ವಿರೋಧಿಸುತ್ತಾ ಮುಂದುವರಿಯುವ ರೀತಿ ಇದು."[೧] ಈ ಮಾತುಗಳಲ್ಲಿ ಲಂಕೇಶರ ಬರವಣಿಗೆ ಹಿಂದಿರುವ ಕೆಲವು ಮಾನದಂಡಗಳು ಗುರುತಿಸಲ್ಪಡುತ್ತವೆ.

೧. ಲಂಕೇಶರ ನಿಲುವುಗಳು ಕಾಲ-ಕಾಲಕ್ಕೆ ಸಮಕಾಲೀನಗೊಳ್ಳುವ ರೀತಿ.

೨. ಅಧಿಕಾರದಲ್ಲಿದ್ದವರು ಉರುಳಿ ಬಿದ್ದಾಗ ಅವರನ್ನು ಲಂಕೇಶರು ನೋಡುವ ಕ್ರಮ.

೩. ತನ್ನನ್ನು ತಾನು ವಿರೋಧಿಸಿಕೊಳ್ಳುತ್ತಲೇ ಮಾಗುವ ವಿಕಸನಶೀಲ ಲೇಖಕನ ಗುಣ.

ಲಂಕೇಶರ ಟೀಕೆ-ಟಿಪ್ಪಣಿಗಳಲ್ಲಿ ಕನ್ನಡ ಸಂಸ್ಕೃತಿ ವಿಮರ್ಶೆ ಬೆಳೆದ ರೀತಿಯನ್ನು ಅಧ್ಯಯನ ಮಾಡಬೇಕಾದರೆ ಮೇಲೆ ಹೇಳಿದ ಅವರ ಬರವಣಿಗೆಯ ಶೈಲಿ ಮುಖ್ಯವಾದುದಾಗುತ್ತದೆ. ಇದರ ಜೊತೆಯಲ್ಲಿಯೇ ಸಂಸ್ಕೃತಿಯನ್ನು ಕುರಿತ ಲಂಕೇಶರ ಧೋರಣೆಯನ್ನು ಮೊದಲಿಗೆ ಕಂಡುಕೊಳ್ಳಬೇಕಾಗುತ್ತದೆ.

ಸಾಮಾನ್ಯವಾಗಿ ನಮ್ಮ ಮೊದಲಿನ ಸಂಸ್ಕೃತಿ ಮೀಮಾಂಸಕರು ಸಂಸ್ಕೃತಿ ಎಂದರೆ ಅಂತರಂಗಿಕವಾದದ್ದು ಎನ್ನುವ ಮ್ಯಾಥ್ಯೂ ಅನಾರ್ಲ್ಡ್‌ನ ಅಭಿಪ್ರಾಯಕ್ಕೆ ಗಂಟು ಬಿದ್ದವರಾಗಿದ್ದರು. ಬೇರೊಂದು ಮಾತಿನಲ್ಲಿ ಹೇಳುವುದಾದರೆ ಅದು ಸಂಸ್ಕೃತಿ ಎಂಬುದು 'ತರುತಳೆದ ಪುಷ್ಪದಂತೆ' ಪುಷ್ಪ ತರುವಿನಿಂದ ಬಂದದ್ದಾದರೂ ಅದು ಅದರ ಸಾರರೂಪಿ ಎನ್ನುವಂತೆ ಗೌರವಕ್ಕೆ ಪಾತ್ರವಾಗುತ್ತದೆ. ಹಾಗೆಯೇ ಈ ವಿದ್ವಾಂಸರ ಕಣ್ಣಿನಲ್ಲಿ ಸಂಸ್ಕೃತಿ ಎಂಬುದು ಜನಜೀವನದಿಂದಲೇ ಬಂದುದಾದರೂ ಅದರ ಸಾಧನೆ ಸಾಫಲ್ಯಗಳೇ ಸಂಸ್ಕೃತಿ ಎನ್ನುವ ಭಾವನೆ ಇದೆ. ಇಂಥವರ ಪ್ರಕಾರ ಸಂಸ್ಕೃತಿ ಎಂಬುದು ರಾಜಕೀಯಾತೀತ ವಿಚಾರ. ಆದರೆ ಇನ್ನೂ ಕೆಲವು ವಿದ್ವಾಂಸರು ಸಂಸ್ಕೃತಿ ಎಂಬುದು ಸೇರಬೇಕಾದ ಗುರಿಯಲ್ಲ, ಸಾಗಬೇಕಾದ ದಾರಿ ಎನ್ನುವಂತೆ ಜನ ಜೀವನದ ಕಲೆ, ನಂಬಿಕೆ, ಆಚಾರ, ವಿಚಾರ, ಸಾಮಾಜಿಕ ಧಾರ್ಮಿಕ, ರಾಜಕೀಯ ಇವುಗಳೆಲ್ಲವನ್ನು ಒಳಗೊಳ್ಳುವ ನೆಲೆ ಎಂದು ಭಾವಿಸುತ್ತಾರೆ. ಇವರ ದೃಷ್ಟಿಯಲ್ಲಿ ಸಂಸ್ಕೃತಿ ಎಂಬುದು ರಾಜಕೀಯತೀತವಲ್ಲ. ಅಂತರಂಗಿಕ ಗುಣಗಳ ಸಾಕಾರ ಮಾತ್ರವಲ್ಲ

ಹಳೆಯದ್ದು ಮಾತ್ರ ಸಂಸ್ಕೃತಿ ಎನ್ನುವ ಧೋರಣೆಯೂ ಇಲ್ಲ. ಹಾಗಾಗಿಯೇ ಸಂಸ್ಕೃತಿಯ ಬಹುಮುಖತ್ವದ ಬಗ್ಗೆ ಈ ವಿದ್ವಾಂಸರಲ್ಲಿ ಒತ್ತು ಇದೆ.

ಲಂಕೇಶರ ಸಂಸ್ಕೃತಿಯನ್ನು ಕುರಿತ ದೃಷ್ಟಿಕೋನವೂ ಕೂಡ ಬಹುಮುಖತ್ವದ ಬಗ್ಗೆ ನಂಬಿಕೆಯುಳ್ಳದ್ದು. ಅವರ 'ಸಂಕ್ರಾತಿ' ನಾಟಕವು ಹನ್ನೆರಡನೇ ಶತಮಾನದ ಶರಣ ಚಳುವಳಿಯನ್ನು ಭಿತ್ತಿಯಾಗಿಸಿಕೊಂಡಿದೆ. ಆದರೆ ಈ ನಾಟಕದ ಮಹತ್ವದ ಒಳನೋಟವೆಂದರೆ ದಲಿತರಿಗೂ ತಮ್ಮದೇ ಆದ ವಿಶಿಷ್ಟ ಸಂಸ್ಕೃತಿಯಿದೆ ಎಂದು ಗುರುತಿಸುವುದು. ಒಂದು ಮಹಾಪರಂಪರೆಯ ಒಳಗಡೆ ಕಿರು ಪರಂಪರೆಗಳು ಜೀವಂತವಾಗಿರುತ್ತವೆ ಎಂಬ ನಂಬಿಕೆ ಇಲ್ಲಿ ಪ್ರಧಾನವಾಗಿದೆ. ಬಸವಣ್ಣನ ಮಹಾಪರಂಪರೆಯನ್ನು ಒಲವನ್ನು ಇತ್ಯಾತ್ಮಕ ನೋಡುವಂತೆ, ಇದಕ್ಕಿಂತ ಭಿನ್ನವಾದ ಉಜ್ಜನ ಜೀವನ ವಿಧಾನವನ್ನು ನಾಟಕದಲ್ಲಿ ಲಂಕೇಶರು ಇತ್ಯಾತ್ಮಕವಾಗಿಯೆ ಮಂಡಿಸುತ್ತಾರೆ. ಅವರ 'ಅವ್ವ' ಕವಿತೆಯು ಚರಿತ್ರೆಯ ಪುಸ್ತಕದ ಶಾಂತ, ಶ್ವೇತ, ಗಂಭೀರೆಯರಿಗಿಂತ ಸಾಂಸ್ಕೃತಿಕವಾಗಿ ಭಿನ್ನವಾದ 'ಅವ್ವ'ನ ಚಿತ್ರವನ್ನು ಇತ್ಯಾತ್ಮಕವಾಗಿ ಮಂಡಿಸುವುದನ್ನು ಈ ಹಿನ್ನೆಲೆಯಲ್ಲಿಯೆ ಗಮನಿಸಬೇಕು. ಈ ರೀತಿಯ ಗ್ರಹಿಕೆ ಬಹುಮುಖಿ ಸಂಸ್ಕೃತಿಯ ಬಗ್ಗೆ ಅರಿವಿದ್ದಾಗ ಮಾತ್ರ ಮೂಡುವಂಥದ್ದು.

ಈ ಎಲ್ಲಾ ಹಿನ್ನೆಲೆಯಲ್ಲಿ ಲಂಕೇಶರ ಟೀಕೆ-ಟಿಪ್ಪಣಿಗಳಲ್ಲಿ ಕಂಡುಬರುವ 'ಕನ್ನಡ ಸಂಸ್ಕೃತಿಯ ವಿಮರ್ಶೆ'ಯ ಕಿರು ಪರಿಚಯವನ್ನು ಮುಂದೆ ಅಧ್ಯಯನಕ್ಕೊಳಪಡಿಸಿದ್ದೇನೆ. ಸಂಸ್ಕೃತಿಯ ಏಕಾಕೃತಿಯ ಕಡೆಗೆ ರಾಜಕೀಯ ಅಧಿಕಾರ ಕೇಂದ್ರಗಳು ತುಡಿಯುತ್ತಿರುವ ಈ ಕಾಲಘಟ್ಟದಲ್ಲಿ ಬಹುಮುಖತೆಯ ಬಗ್ಗೆ ನಂಬಿಕೆ ಇಟ್ಟಿರುವ ಲಂಕೇಶರ ಅಧ್ಯಯನವು ಸಹಜವಾಗಿಯೆ ಮಹತ್ವ ಪಡೆಯುತ್ತದೆ.

**ಅಧ್ಯಾಯ-೧ರ ಅಡಿಟಿಪ್ಪಣಿ**

೧. ಲಂಕೇಶ್ ಪಿ., ಟೀಕೆ-ಟಿಪ್ಪಣಿ ಸಂಪುಟ-೧, ಪತ್ರಿಕಾ ಪ್ರಕಾಶನ, ಬೆಂಗಳೂರು, ೧೯೯೭, ಪ್ರಸ್ತಾವನೆಯಲ್ಲಿ.

ಅಧ್ಯಾಯ : ಎರಡು

# ಸಂಸ್ಕೃತಿ, ಸಾಂಸ್ಕೃತಿಕ ವಿಮರ್ಶೆಗಳ ಪರಿಚಯ ಲಂಕೇಶರ ದೃಷ್ಟಿಕೋನ ಸಹಿತ

ಅಧ್ಯಾಯ-೨

# ಸಂಸ್ಕೃತಿ, ಸಾಂಸ್ಕೃತಿಕ ವಿಮರ್ಶೆಗಳ ಪರಿಚಯ- ಲಂಕೇಶರ ದೃಷ್ಟಿಕೋನ ಸಹಿತ

ವಿಶ್ವದಲ್ಲಿ ಭಾರತೀಯ ಸಂಸ್ಕೃತಿಗಳಿಗೆ ಒಂದು ವಿಶಿಷ್ಟ ಸ್ಥಾನವಿದೆ. ನಮ್ಮ ಸಂಸ್ಕೃತಿ ಪರಂಪರೆಗಳನ್ನು ರಮ್ಯವಾಗಿಸಿ, ಪ್ರಾಚೀನವೆಂದು ಆರಾಧಿಸುವ ಗುಣವು ಸಂಸ್ಕೃತಿಯ ವ್ಯಾಖ್ಯಾನಕಾರರಲ್ಲಿದೆ. ಈ ರೀತಿಯ ರಮ್ಯೀಕರಣ, ಆದರ್ಶೀಕರಣಗಳು ಕೆಲವೊಮ್ಮೆ ಯಾವುದೊ ಒಂದು ಸಂಸ್ಕೃತಿಯನ್ನು ಮಾತ್ರ ಶ್ರೇಷ್ಟವೆಂದು ಭಾವಿಸಿ ಉಳಿದ ಸಂಸ್ಕೃತಿಗಳನ್ನು ನಿರ್ಲಕ್ಷಿಸುತ್ತವೆ ಅಥವಾ ಕೀಳಾಗಿ ಕಾಣುತ್ತವೆ. ಸಂಸ್ಕೃತಿಯ ಈ ಶ್ರೇಷ್ಟತೆಯ ಕಲ್ಪನೆ ರೂಪುಗೊಂಡದ್ದು ವಸಾಹತುಶಾಹಿ ಸಂದರ್ಭದಲ್ಲಿ. ವಸಾಹತು ಶಿಕ್ಷಣ ಪಡೆದ ಭಾರತೀಯರು ರೂಪಿಸಿಕೊಂಡದ್ದು ಆಧುನಿಕತೆ = ಇಂಗ್ಲಿಷ್ ಶಿಕ್ಷಣ =ಪ್ರಗತಿ ಎನ್ನುವ ಸಮೀಕರಣವನ್ನು. ಈ ಸಮೀಕರಣ ಇಂಗ್ಲೀಷ್ ಶಿಕ್ಷಣದ ಮೂಲಕ ಪಡೆದ ಸಂಸ್ಕೃತಿಯ ವ್ಯಾಖ್ಯಾನವನ್ನು ಭಾರತೀಯ ಸಂಸ್ಕೃತಿಗಳಿಗೂ ಅನ್ವಯಿಸಿತು. ಇದರ ಪರಿಣಾಮ ಸಂಸ್ಕೃತಿಯ ಶ್ರೇಷ್ಟತೆಯ ಕಲ್ಪನೆ. ಸಂಸ್ಕೃತಿಯ ಏಕಾಕೃತಿಗೆ ಮನ್ನಣೆ. ಈ ರೀತಿಯ ಏಕಮುಖಿಯ ವ್ಯಾಖ್ಯಾನದಿಂದ ಸಂಸ್ಕೃತಿ ನಿರ್ವಚನ ಬದಲಾಗಲು ಬಹಳಷ್ಟು ಕಾಲವೇ ಬೇಕಾಯಿತು. ಈಗಿನ ಸಂದರ್ಭದಲ್ಲಿ ಜಾಗತೀಕರಣ ಎನ್ನುವ ಅಮೂರ್ತವಾದ ಪ್ರಭಾವ ನಮ್ಮ ಸಂಸ್ಕೃತಿಗಳ ಮೇಲೆ ಮೂಲಭೂತವಾದ ಪರಿಣಾಮವನ್ನು ಬೀರುತ್ತಿದೆ. ಕೆಲವು ವಿದ್ವಾಂಸರು ಜಾಗತೀಕರಣದಿಂದ ಕೇವಲ ಆರ್ಥಿಕ ಬದಲಾವಣೆಗಳಷ್ಟೇ ಸಂಭವಿಸುತ್ತಿವೆ. ಸಂಸ್ಕೃತಿಯ ಮೇಲೆ ಯಾವುದೇ ರೀತಿಯ ಪರಿಣಾಮವನ್ನು ಅದು ಬೀರಲಾರದು. ಏಕೆಂದರೆ ನಮ್ಮ ಸಂಸ್ಕೃತಿಯು ಪ್ರಾಚೀನ, ಸನಾತನ, ಶಾಶ್ವತ ಎಂದು ವಾದಿಸುತ್ತಾರೆ. ಹೀಗೆ ಹೇಳುವವರು ಪಾರ್ಶ್ವಿಕ ದೃಷ್ಟಿಯಲ್ಲಷ್ಟೇ ಹೇಳುತ್ತಾರೆ. ಯಾವುದೇ ಆರ್ಥಿಕ ಬದಲಾವಣೆಯು ಸಮಾಜ ಮತ್ತು ಸಂಸ್ಕೃತಿಯ ಸಮಗ್ರತೆಯೊಂದಿಗೆ ಮುಖಾ-ಮುಖಿಯಾಗೇ ತೀರುತ್ತದೆ. ಆದ್ದರಿಂದ ಇಂದು ಸಂಸ್ಕೃತಿಯನ್ನು ವ್ಯಾಖ್ಯಾನಿಸಬೇಕಾದಾಗ ನಮ್ಮ ದೃಷ್ಟಿಯು ವಸಾಹತುಶಾಹಿಯ ಸಾಂಸ್ಕೃತಿಕ ಏಕಾಕೃತಿಯನ್ನಾಗಲಿ ಅಥವಾ ಜಾಗತೀಕರಣದ ಸಾಂಸ್ಕೃತಿಕ ಏಕಾಕೃತಿಯನ್ನಾಗಲಿ ಆದರಿಸದೇ ನಿಜವಾದ ಭಾರತೀಯ ಬಹುಮುಖತೆ ಯನ್ನು ಗಮನದಲ್ಲಿರಿಸಿಕೊಳ್ಳಬೇಕಾಗುತ್ತದೆ.

ಭಾರತದಂತಹ ಬಹುಭಾಷೆಗಳ, ಬಹು ಧರ್ಮಗಳು, ಬಹು ಜನಾಂಗಗಳನ್ನು ಹೊಂದಿರುವ ದೇಶಗಳಲ್ಲಿ ಏಕ ಸಂಸ್ಕೃತಿಯನ್ನು ಹುಡುಕುವುದು ಮರುಭೂಮಿಯಲ್ಲಿ ನೀರನ್ನ ತೆಗೆದಂತೆ. ಇದಕ್ಕೆ ಕಾರಣಗಳು ಹಲವಾರು ಇರಬಹುದು. ಬ್ರಿಟೀಷ್ ಸಾಮ್ರಾಜ್ಯಶಾಹಿಯ

ಆಡಳಿತ ಪ್ರಾರಂಭವಾದಾಗ ಇಲ್ಲಿನ ಧರ್ಮ ಮತ್ತು ಸಂಸ್ಕೃತಿಯ ಮೂಲ ಬೇರುಗಳಿಗೆ ಕೆಲವು ಪೆಟ್ಟುಗಳು ಬಿದ್ದವು. ಇಂಗ್ಲಿಷ್ ಶಿಕ್ಷಣದ ಪ್ರಭಾವ ಹಾಗೂ ಕ್ರಿಶ್ಚಿಯನ್ ಧರ್ಮ ನಮ್ಮ ಮೂಲ ಸಂಸ್ಕೃತಿಯ ಮೇಲೆ ಅನೇಕ ಬದಲಾವಣೆಯನ್ನು ಉಂಟುಮಾಡಿದವು. ಈ ಎಲ್ಲಾ ಕಾರಣಗಳಿಂದ ಭಾರತದಲ್ಲಿ ಏಕಸಂಸ್ಕೃತಿಯನ್ನು ಹುಡುಕುವುದು ಸರಿಯಾದ ಕ್ರಮವಲ್ಲ. ಬದಲಾವಣೆಯೇ ಜೀವಂತಿಕೆಯ ಲಕ್ಷಣ. ಆದರೆ ಈ ಅತಿಯಾದ ಬದಲಾವಣೆಯಲ್ಲಿ ತನ್ನ ಮೂಲತನವನ್ನು ಕಳೆದುಕೊಳ್ಳುವ ಅಪಾಯವೂ ಇದೆ.

ಇಪ್ಪತ್ತನೆಯ ಶತಮಾನದಲ್ಲಿ ತುಂಬಾ ವ್ಯಾಪಕವಾಗಿ ಬಳಕೆಯಾಗುತ್ತಿರುವ ಶಬ್ದಗಳಲ್ಲಿ 'ಸಂಸ್ಕೃತಿ'ಯೂ ಒಂದಾಗಿದೆ. ಈ ಪದವನ್ನು ಬಳಸಿಕೊಂಡು ವಿವಿಧ ಪರಿಭಾಷೆಗಳು ಸಹ ಹುಟ್ಟಿವೆ. ಧರ್ಮಗಳೊಂದಿಗೆ ಹಿಂದೂ ಸಂಸ್ಕೃತಿ, ಇಸ್ಲಾಂ ಸಂಸ್ಕೃತಿ, ಮುಸ್ಲಿಂ ಸಂಸ್ಕೃತಿ ಇತ್ಯಾದಿ. ವ್ಯಾಪಕವಾದ ಅರ್ಥದಲ್ಲಿ ಭಾರತೀಯ ಸಂಸ್ಕೃತಿ, ಅಮೇರಿಕಾ ಸಂಸ್ಕೃತಿ, ಜರ್ಮನ್ ಸಂಸ್ಕೃತಿ, ಪ್ರಾಂತ್ಯಕ್ಕೆ ಸಂಬಂಧಿಸಿದಂತೆ ನಗರ ಸಂಸ್ಕೃತಿ, ಗ್ರಾಮೀಣ ಸಂಸ್ಕೃತಿ, ಬುಡಕಟ್ಟು ಸಂಸ್ಕೃತಿ ಇತ್ಯಾದಿ. ಆಶಯ ಪ್ರಧಾನವಾದ ಪರ್ಯಾಯ ಸಂಸ್ಕೃತಿ, ಉಪಸಂಸ್ಕೃತಿ, ಪ್ರತಿಸಂಸ್ಕೃತಿ"[೧] ಇತ್ಯಾದಿ ಪರಿಭಾಷೆಗಳು ಇಂದು ರೂಢಿಗೆ ಬಂದಿವೆ.

**ಸಂಸ್ಕೃತಿ ಶಬ್ದದ ನಿಷ್ಪತ್ತಿ :**

ಸಂಸ್ಕೃತಿ ಎಂಬ ಶಬ್ದವು 'ಸಂಸ್ಕೃತ', 'ಸಂಸ್ಕಾರ' ಮೂಲದಿಂದಲೇ ಹುಟ್ಟಿದೆ. ಸಂಸ್ಕೃತ ಅಥವಾ ಸಂಸ್ಕಾರ ಎಂದರೆ ಸುಧಾರಿಸಿದ, ನಯಗೊಳಿಸಿದ, ಪವಿತ್ರಗೊಳಿಸಿದ, ಪರಿಶುದ್ಧಗೊಳಿಸಿದ, ಶ್ರೇಷ್ಟವಾದ ಎಂಬ ಅರ್ಥಗಳಿವೆ. ನಿಘಂಟುವಿನಲ್ಲಿ ಸಂಸ್ಕೃತಿ ಶಬ್ದಕ್ಕೆ 'ಮಾನಸಿಕ ಪಕ್ವತೆ' ಎಂಬ ಅರ್ಥ ನೀಡಿದ್ದಾರೆ. ಕಿಟೆಲ್ ತನ್ನ ನಿಘಂಟಿನಲ್ಲಿ 'ಸಂಸ್ಕಾರ' ಎಂದು ದಾಖಲಿಸಿದ್ದಾರೆ."[೨] ಸಂಸ್ಕಾರ ಎಂದರೆ 'ಪವಿತ್ರೀಕರಿಸುವ', 'ಶುದ್ಧೀಕರಿಸುವ' ಎಂಬ ಅರ್ಥಗಳಾಗುತ್ತವೆ.

ಸಂಸ್ಕೃತಿಗೆ ಸಂವಾದಿ ಪದವಾಗಿ ಇಂಗ್ಲೀಷ್‌ನಲ್ಲಿ 'ಕಲ್ಚರ್' ಎಂಬ ಶಬ್ದವನ್ನು ಬಳಸುತ್ತಾರೆ. ಇದು ಲ್ಯಾಟೀನ್ ಭಾಷೆಯ ಕಲ್ಟ್ ಅಥವಾ ಕಲ್ಟಸ್ ಎಂಬ ಶಬ್ದದಿಂದ ಬಂದಿದೆ. "ಈ ಶಬ್ದಗಳಿಗೆ ಮೂಲದಲ್ಲಿ ಭೂಮಿದೈವದ ಆರಾಧನೆ, ಪೈರು ಬೆಳೆಯುವುದು ಎಂಬ ಅರ್ಥಗಳಿಗೆ."[೩] ಸಂಸ್ಪೃತಿ ಎಂಬುದು ಮೂಲಭೂತವಾಗಿ ಒಂದು ರಚನೆ ಅಥವಾ ಒಂದು ಸಂಕೇತ. ಬೌದ್ಧಿಕವಾಗಿ ರೂಪಿಸಿಕೊಂಡ ಒಂದು ಪರಿಕಲ್ಪನೆಯಾಗಿದೆ.

ಸಂಸ್ಕೃತಿ ಶಬ್ದಕ್ಕೆ ನಿಘಂಟಿನಲ್ಲಿ 'ಮಾನಸಿಕ ಪಕ್ವತೆ' ಎಂದು ಅರ್ಥವನ್ನು ನೀಡಲಾಗಿದೆ. ಇದು ಸಂಸ್ಕೃತಿಯು ಬೆಳವಣಿಗೆಯನ್ನು ಹೊಂದಿ ಒಂದು ಹಂತವನ್ನು ತಲುಪಿರುವ ಸಿದ್ಧಮಾದರಿ ಎಂಬ ಅರ್ಥ ನೀಡುತ್ತದೆ. ಆದರೆ ಲ್ಯಾಟೀನ್ ಭಾಷೆಯಲ್ಲಿ ಈ ಪದಕ್ಕೆ ಬೆಳೆಯುವುದು, ಆರಾಧನೆ

ಎಂಬ ಅರ್ಥಗಳಿವೆ. ಇಲ್ಲಿ ಸಂಸ್ಕೃತಿಯು ಇನ್ನೂ ಪರಿವರ್ತನೆಯನ್ನು ಹೊಂದುತ್ತಿರುವುದು, ವಿಕಾಸವಾಗುತ್ತಿರುವುದು ಎಂಬ ಅರ್ಥಗಳು ಸ್ಫುರಿಸುತ್ತವೆ. ಈ ಎರಡೂ ಅರ್ಥಗಳಲ್ಲಿ ಮ್ಯಾಥ್ಯೂ ಅರ್ನಾಲ್ಡ್, ಡಿ.ವಿ.ಜಿ., ಮಾಸ್ತಿಯಂತಹ ಆದರ್ಶವಾದಿ ಸಂಸ್ಕೃತಿ ಚಿಂತಕರು ಸಂಸ್ಕೃತಿಯ ಏಕರೂಪಿ ನಿರ್ವಚನದ ಕಡೆಗೆ, ವರ್ತನೆಯ ಬಹುಮುಖತ್ವದ ಕಡೆಗೆ ಸಾಗಿದ್ದಾರೆ.

ಹೀಗೆ ಸಂಸ್ಕೃತಿ ಶಬ್ದವು ತನ್ನ ಇತಿಹಾಸದುದ್ದಕ್ಕೂ ತಾನು ಗಳಿಸಿಕೊಂಡು ಬಂದ ಅರ್ಥಗಳನ್ನು ಅದು ಬಳಕೆಯಾಗುವ ರೀತಿಯನ್ನು ಕಾಣುವಾಗ ಅದೊಂದು ಸಾಮಾಜಿಕ, ರಾಜಕೀಯ, ಆರ್ಥಿಕ ವಿಚಾರಗಳನ್ನು ಹೇಳಲು ಸಜ್ಜುಗೊಂಡ ಭಾಷಿಕ ಸಂಕೇತ ಎಂದು ಗೊತ್ತಾಗುತ್ತದೆ. ಇಷ್ಟೆಲ್ಲಾ ಅರ್ಥಗಳನ್ನು ಒಳಗೊಂಡಿರುವ ಈ ಪದವು ಆಧುನಿಕ ಕಾಲದಲ್ಲಿ ಒಂದು ಮಹತ್ವದ ಪರಿಕಲ್ಪನೆ ಮತ್ತು ರಚನೆಯಾಗಿದೆ.

ಸಮಾಜ ಜೀವನದ ಒಂದು ಭಾಗ ಸಂಸ್ಕೃತಿ. ಮನುಷ್ಯನು ಈ ಸಂಸ್ಕೃತಿ ಮಹತ್ವವನ್ನು ತೊರೆದು ಒಂಟಿಯಾಗಿ ಬಾಳುವುದು ಅಸಾಧ್ಯ. ಮನುಷ್ಯನ ಎಲ್ಲಾ ಸ್ವಭಾವಕ್ಕೆ ವ್ಯಕ್ತಿತ್ವನ್ನು, ಬೆಲೆಯನ್ನೂ, ಕೊಡುವ ಎಲ್ಲ ಶಕ್ತಿಗಳ ಒಟ್ಟು ಮೊತ್ತದ ವಿಕಾಸವೇ ಸಂಸ್ಕೃತಿ. ಆದ್ದರಿಂದ ಸಂಸ್ಕೃತಿ ಎಂಬುದು ಮತಧರ್ಮಕ್ಕಿಂತಲೂ ವಿಶಾಲವಾದುದು ಹಾಗೂ ವಿಶಿಷ್ಟವಾದುದಾಗಿದೆ.

ಸಂಸ್ಕೃತಿ ಎಂಬುದು ಹೊರಗೆ ಗೋಚರಿಸಲಾಗದ, ಕಲ್ಪಿಸಲಾಗದ ನೆನಪಿನಲ್ಲಿ ಹಿಡಿದಿಡಲು ಸಾಧ್ಯವಾಗದ ಮನಸ್ಸು, ಬುದ್ಧಿ, ಸ್ಮೃತಿ ಇವೆಲ್ಲಕ್ಕೂ ಆಧಾರವಾದ ಆತ್ಮಕ್ಕೆ ಸಂಬಂಧಿಸಿದ್ದು, ಇದರಲ್ಲಿ ಜ್ಞಾನ ಮತ್ತು ಔದಾರ್ಯ ಎಲ್ಲವನ್ನೂ ಒಳಗೊಂಡಿರುವುದು ಸಂಸ್ಕೃತಿ ಇತ್ಯಾದಿ ಅರ್ಥಗಳಲ್ಲಿ ಸಂಸ್ಕೃತಿಯನ್ನು ವ್ಯಾಖ್ಯಾನಿಸಲಾಗುತ್ತಿದೆ. ಈ ಹಿನ್ನೆಲೆಯಲ್ಲಿ ಮುಂದೆ ಸಂಸ್ಕೃತಿಯ ಕುರಿತಾದ ವಿವಿಧ ವಿಧ್ವಾಂಸರ ವ್ಯಾಖ್ಯಾನಗಳನ್ನು ಪರಿಶೀಲೆಗೆ ಒಳಪಡಿಸಿದ್ದೇನೆ.

**ಸಂಸ್ಕೃತಿಯ ವ್ಯಾಖ್ಯಾನಗಳು :**

ಸಂಸ್ಕೃತಿಯ ಚಿಂತನೆ ಹಾಗೂ ವ್ಯಾಖ್ಯಾನವನ್ನು ನೀಡಿದವರಲ್ಲಿ ಬಹುಮಂದಿ ಪಾಶ್ಚಾತ್ಯರು. ಅವರುಗಳಲ್ಲಿ ಸಮಾಜಶಾಸ್ತ್ರ, ರಾಜ್ಯಶಾಸ್ತ್ರ, ತತ್ವಜ್ಞಾನ ಮತ್ತು ಮಾನವಶಾಸ್ತ್ರಕ್ಕೆ ಸೇರಿದ ವಿದ್ವಾಂಸರಿದ್ದಾರೆ. ಕನ್ನಡದ ಸಂದರ್ಭದಲ್ಲಿ ಬಹುಪಾಲು ಸಾಹಿತ್ಯಕ್ಷೇತ್ರದವರೆ ಸಂಸ್ಕೃತಿ ಚಿಂತನೆ ನಡೆಸಿದ್ದಾರೆ. ಇವರ ಚಿಂತನೆಯ ತಾತ್ತ್ವಿಕ ಸ್ವರೂಪದ ಆಧಾರದ ಮೇಲೆ ಸಂಸ್ಕೃತಿಯ ಚಿಂತಕರನ್ನು ನೈತಿಕ ಆದರ್ಶವಾದಿಗಳು ಮತ್ತು ಮಾನವಶಾಸ್ತ್ರದವರು ಎಂದು ವಿಂಗಡಿಸಬಹುದು.

**೧. ಮ್ಯಾಥ್ಯೂ ಅರ್ನಾಲ್ಡ್ :**

ಇಂಗ್ಲೇಂಡಿನ ಒಬ್ಬ ನೈತಿಕ ಆದರ್ಶವಾದಿ ಸಂಸ್ಕೃತಿ ಚಿಂತಕ. ಬಹುತೇಕ ಚಿಂತಕರ ಮೇಲೆ ಈತನ ಪ್ರಭಾವ ಉಂಟಾಗಿದೆ. ಇವನ ಪ್ರಸಿದ್ಧ ಕೃತಿಯಾದ 'ಕಲ್ಚರ್ ಅಂಡ್ ಆ್ಯನಾರ್ಕಿ' ಎಂಬ ವಚನ ಪ್ರಬಂಧದಲ್ಲಿ ಸಂಸ್ಕೃತಿಯ ಬಗ್ಗೆ ತನ್ನದೇ ಆದ ವಿಶಿಷ್ಟ ವ್ಯಾಖ್ಯಾನ ನೀಡಿದ್ದಾರೆ.

"ಬುದ್ಧಿಗೆ ತಿಳುವಳಿಕೆಯನ್ನು ಸಂಪಾದಿಸಿಕೊಡಬೇಕೆಂಬ ಶುದ್ಧ ವಿಜ್ಞಾನಾಕಾಂಕ್ಷೆಯ ಬಲದಿಂದ ಮಾತ್ರವೇ ಅಲ್ಲದೆ ಜನಕ್ಕೆ ಒಳ್ಳೆಯದನ್ನು ಮಾಡಬೇಕೆಂಬ ಸಮಾಜ ಹಿತಾಕಾಂಕ್ಷೆಯ ಮತ್ತು ಧರ್ಮಾಕಾಂಕ್ಷೆಯ ಬಲದಿಂದಲೂ ಪ್ರೇರಿತವಾಗಿ ನಡೆಯತಕ್ಕದ್ದು ಸಂಸ್ಕೃತಿ."[೪]

**೨. ಟಿ.ಎಸ್. ಎಲಿಯಟ್ :**

ವಿಶ್ವಸಾಹಿತ್ಯಕ್ಕೆ ಪ್ರೇರಣೆ ನೀಡಿದ ಈತ ಸಂಸ್ಕೃತಿಯ ಚಿಂತಕನಾಗಿಯೂ ತನ್ನದೇ ಆದ ಪ್ರಭಾವ ಬೀರಿದ್ದಾನೆ. ತನ್ನ 'ನೋಟ್ಸ್ ಟುವರ್ಡ್ಸ್ ದಿ ಡೆಫಿನಿಶನ್ ಆಫ್ ಕಲ್ಚರ್' ಎಂಬ ಕೃತಿ ಸಂಸ್ಕೃತಿ ಚಿಂತನೆಯ ಕೃತಿಯಾಗಿದೆ. "ಒಂದು ಪ್ರದೇಶದಲ್ಲಿ ವಾಸಿಸುವ ಒಂದು ಜನಾಂಗದ ಸಮಗ್ರ ಜೀವನವೇ ಸಂಸ್ಕೃತಿ."[೫]

**ಮಾನವಶಾಸ್ತ್ರಜ್ಞರು :**

ಕನ್ನಡ ಜಾನಪದ ಅಧ್ಯಯನಕಾರರು ಮತ್ತು ಸಮಾಜಶಾಸ್ತ್ರದವರು ಪಶ್ಚಿಮದ ಅನೇಕ ಸಾಂಪ್ರದಾಯಕ ಮಾನವಶಾಸ್ತ್ರಜ್ಞರ ಪ್ರಭಾವಕ್ಕೆ ಒಳಗಾದವರಾಗಿದ್ದಾರೆ. ಅವರಲ್ಲಿ ಇ.ಬಿ. ಟೇಲರ್, ಕ್ರೋಬರ್, ರೂತ್ ಬೆನಡಿಕ್ಟ್, ಹರ್ಸ್ಕೋ ವಿಟ್ಸ್ ಪ್ರಮುಖರಾಗಿದ್ದಾರೆ.

**೧. ಇ.ಬಿ. ಟೇಲರ್ :**

ಈತ ಪ್ರಮುಖವಾಗಿ ಬುಡಕಟ್ಟು ಸಂಸ್ಕೃತಿಯ ಅಧ್ಯಯನದ ವಿಧಾನವನ್ನು ರೂಪಿಸಿದವನು. ತನ್ನ 'ಪ್ರಿಮಿಟಿನ್ ಕಲ್ಚರ್' ಎಂಬ ಗ್ರಂಥದಲ್ಲಿ ಸಂಸ್ಕೃತಿ ಅಥವಾ ನಾಗರೀಕತೆಯನ್ನು ಅದರ ವಿಶಾಲ ಮಾನವ ಶಾಸ್ತ್ರೀಯ ಅರ್ಥದಲ್ಲಿ ತೆಗೆದುಕೊಂಡಾಗ ಆ ಸಂಕೀರ್ಣ ಸಮಷ್ಟಿ ಜ್ಞಾನ, ನಂಬಿಕೆ. ಕಲೆ, ನೀತಿಗಳು, ಕಾನೂನು ಸಂಪ್ರದಾಯಗಳು ಹಾಗೂ ಮನುಷ್ಯ ಸಮಾಜದ ಸದಸ್ಯರಾಗಿ ಗಳಿಸಿಕೊಂಡ ಸಮಸ್ತ ಸಾಮರ್ಥ್ಯಗಳು ಮತ್ತು ಅಭ್ಯಾಸಗಳನ್ನೆಲ್ಲಾ ಒಳಗೊಂಡಿರುತ್ತದೆ ಎಂದಿದ್ದಾರೆ.[೬]

**೨. ಎ.ಎಲ್. ಕ್ರೋಬರ್ :**

"ಸ್ವಯಂಸ್ಫೂರ್ತವಲ್ಲದ ಅಥವಾ ಜನ್ಮ ಜಾತವಲ್ಲದ ಶಾರೀರಿಕವಲ್ಲದ ಎಲ್ಲ ಮಾನವಜೀವಿಗಳ ಸಮಸ್ತ ಕ್ರಿಯೆಗಳನ್ನು ಸಂಸ್ಕೃತಿ ಎಂದು ಕರೆಯಬಹುದು."

**೩. ಹರಸ್ಕೋ ವಿಟ್ಸ್ :**

"ಪರಿಸರದ ಮಾನವ ನಿರ್ಮಿತ ಭಾಗವೇ ಸಂಸ್ಕೃತಿ."[೭] ಸಂಸ್ಕೃತಿ ಮಾನವ ಜೀವನದ ಒಂದು ಮುಖ. ಒಂದು ನಿಶ್ಚಿತ ಗುಂಪಿಗೆ ಸೇರಿದ ಜನರು ಕಲಿತು ರೂಪಿಸಿಕೊಂಡು ಹಂಚಿಕೊಂಡ ಕಲಿಕೆಯ ವರ್ತನೆ ಅದು ನಮ್ಮ ದೈಹಿಕ ಸ್ವರೂಪಕ್ಕೆ ವಿರುದ್ಧವಾದ ನಮ್ಮ ಸಾಮಾಜಿಕ ಪರಂಪರೆ. ಸಂಸ್ಕೃತಿ ಮನುಷ್ಯರನ್ನು ಒಗ್ಗೂಡಿಸುವ ಸಾಧನವಾಗಿದೆ. 'ವಿಲಿಯಂ ಆರ್ ಭಾಸ್ಕಂ' –ಸಂಸ್ಕೃತಿ

ಮುಖ್ಯವಾಗಿ ಕಲಿಕೆಯಿಂದ ಗಳಿಸಿಕೊಂಡ ಎಲ್ಲಾ ಒಳ್ಳೆಯ ವರ್ತನೆಗಳನ್ನು ಒಳಗೊಳ್ಳುತ್ತದೆ. ಅದು ಒಂದು ಅಂಗೀಕೃತ ಪದ್ಧತಿಗೊಳಪಟ್ಟಿರುತ್ತದೆ.

**ಕನ್ನಡದ ಪ್ರಮುಖ ಸಂಸ್ಕೃತಿ ಚಿಂತಕರು :**

ಪಾಶ್ಚಾತ್ಯರ ಸಾಹಿತ್ಯ ಪ್ರಭಾವ ಹಾಗೂ ಪ್ರೇರಣೆಯಿಂದ ಕನ್ನಡದ ಕೆಲವು ಮಹತ್ವದ ಸಾಹಿತಿಗಳು ಸಂಸ್ಕೃತಿಯ ಬಗ್ಗೆ ಚಿಂತನೆಯನ್ನು ಮಾಡಿದ್ದಾರೆ. ಮಾಸ್ತಿ, ಡಿ.ವಿ.ಜಿ., ದೇವುಡು, ಶಂಬಾ, ಅನಂತಮೂರ್ತಿ, ಬರಗೂರು ಮುಖ್ಯರಾದವರಾಗಿದ್ದಾರೆ.

**೧. ಮಾಸ್ತಿ :**

ಜನರ ಒಟ್ಟು ಎಲ್ಲಾ ಅನುಭವದಿಂದ ಅವರ ಮನಸ್ಸಿನಲ್ಲಿ ಉಂಟಾಗಿರುವ ಪರಿಣಾಮ ಸಂಸ್ಕೃತಿ.

**೨. ಡಿ.ವಿ.ಜಿ. :**

ಒಂದು ವಸ್ತು ಅಥವಾ ವರ್ತನೆ ಹೇಗಿದ್ದರೆ ನಮ್ಮ ಜೀವಿತದ ಪರಮೋದ್ದೇಶ ಸಿದ್ಧಿಯು ನಮಗೆ ಹತ್ತಿರ ಹತ್ತಿರವಾದೀತೋ ಅದೇ ಒಳ್ಳೆಯದು, ಅದೇ ಹಿತ, ಅದೇ ಔಚಿತ್ಯ, ಅದೇಸಾಧುತೆ. ಆ ಒಳ್ಳೆಯದನ್ನು ಕಂಡುಕೊಳ್ಳುವ ಪ್ರಯತ್ನವೇ ಆ ಹಿತವನ್ನು ಹುಡುಕುವುದೇ ಸಂಸ್ಕೃತಿ.

**೩. ದೇವುಡು :**

"ಸಂಸ್ಕೃತಿ ಎಂಬುದು ಮಾನವನಿಗೂ ಮೃಗಕ್ಕೂ ಇರುವ ಅಂತರವನ್ನು ತೋರಿಸುವ ಅಂತಸ್ಸತ್ವ. ಮಾನವ ಕಾರ್ಯ ಪ್ರಪಂಚದಲ್ಲಿ ಕಾಣಬರುವ ಮನಸ್ಸಿನ ಬೆಳವಣಿಗೆಯನ್ನು ಅಥವಾ ಬೆಳೆದ ಮನಸ್ಸಿನ ಸ್ಥಿತಿಯನ್ನು ತೋರಿಸುವ ಭಾವನೆ ಸಂಸ್ಕೃತಿ."[೮]

**೪. ಕಾರಂತರು :**

"ಒಂದು ಸಮಾಜದ ನಂಬಿಕೆ, ಆದರ್ಶ, ಯೋಚನೆ ಮೊದಲಾದವು ಪರಂಪರೆಯಿಂದ ಒಂದು ಸ್ತಿಮಿತಕ್ಕೆ ಬಂದು ಆ ಬಳಗಕ್ಕೆ ಸೇರುವ ವ್ಯಕ್ತಿಗಳ ದಿನಚರಿಯಲ್ಲಿ ಮಾತು, ಮಂತ್ರ, ತಂತ್ರ, ಶಿಷ್ಟಾಚಾರಗಳಲ್ಲಿ ವ್ಯಕ್ತವಾಗುವ ಬಗೆಯನ್ನು ನಾವು ಸಂಸ್ಕೃತಿ ಎಂದು ತಿಳಿಯಬೇಕಾಗುತ್ತದೆ ಎಂದಿದ್ದಾರೆ."[೯]

**ಸಂಸ್ಕೃತಿಯ ಪರಿಕಲ್ಪನೆಗಳು :**

ನಮ್ಮ ಸಮಾಜದ ನಿತ್ಯದ ವೈಶಿಷ್ಟ್ಯವನ್ನು ಹಾಗೂ ಬದಲಾಗುವ ವಿದ್ಯಮಾನಗಳನ್ನು ವಿಸ್ತರಿಸಿ ಹೇಳಲು ಅನೇಕ ಪರಿಭಾಷೆಗಳು ಸೃಷ್ಟಿಯಾದವು. ಆದರೆ ಇವು ಸೀಮಿತ ಅರ್ಥವನ್ನು ಸಂಕೇತಿಸುತ್ತವೆ. ಈ ಪರಿಕಲ್ಪನೆಗಳು ಅಧ್ಯಯನಕಾರರು ಬಯಸುವ ಅರ್ಥಪರಂಪರೆಯನ್ನು

ಗರ್ಭೀಕರಿಸಿಕೊಂಡಿರುತ್ತವೆ. ಸಾಂಸ್ಕೃತಿಕ ಓದು, ಸಂಸ್ಕೃತೀಕರಣ, ಪ್ರತಿಸಂಸ್ಕೃತಿ, ಉಪಸಂಸ್ಕೃತಿ ಮುಖ್ಯವಾದವುಗಳು.

**ಪ್ರತಿಸಂಸ್ಕೃತಿ :**

ಈ ಪರಿಕಲ್ಪನೆಯನ್ನು ಮೊದಲಿಗೆ ವ್ಯಾಪಕವಾಗಿ ಬಳಸಿದವರು ರಹಮತ್ ತರಿಕೆರೆಯವರು. ಪ್ರತಿಸಂಸ್ಕೃತಿ ಎಂದರೆ ಸಂಕ್ಷಿಪ್ತ ಅರ್ಥದಲ್ಲಿ ಅಕ್ಷರಸ್ಥ ಮೂಲವರ್ಗದವರಿಂದ ರೂಪುಗೊಂಡಿರುವ ಆಚರಣೆಗಳು, ನಂಬಿಕೆ, ನೀತಿಗಳನ್ನು ಪ್ರಶ್ನಿಸಿ ದುಡಿಯುವ ವರ್ಗದವರಲ್ಲಿರುವ ಸಮುದಾಯದ ಸಾಂಸ್ಕೃತಿಕ ಆಯಾಮಗಳನ್ನು ಗುರುತಿಸುವುದಾಗಿದೆ. ಶತ–ಶತಮಾನಗಳಿಂದ ಉಚ್ಚ ವರ್ಗದವರಿಂದ ಶೋಷಣೆಗೆ, ಅವಮಾನ, ತಿರಸ್ಕಾರಗಳಿಗೆ ಒಳಗಾಗಿ ತಮ್ಮಲ್ಲಿರುವ ನಂಬಿಕೆಗಳನ್ನು ಅಪಮೌಲ್ಯೀಕರಿಸಿ ಕೊಂಡಿರುವುದು ಒಂದು ಭಾಗವಾಗಿತ್ತು. ಯಜಮಾನ ಸಂಸ್ಕೃತಿ ತನ್ನದು ಶ್ರೇಷ್ಠವೆಂದು ಉಳಿದವು ಕನಿಷ್ಟವೆಂದು ತೀರ್ಮಾನಿಸಿದ್ದು ಇತಿಹಾಸ. ಆದ್ದರಿಂದ ಈಗ ಕನಿಷ್ಟವೆಂದು, ಹೀನವೆಂದು ಬಗೆದಿರುವ ಈ ಸಾಂಸ್ಕೃತಿಕ ಆಕೃತಿಗಳಲ್ಲಿರುವ ಶ್ರೇಷ್ಠ ಮೌಲ್ಯಗಳನ್ನು ಗುರುತಿಸುವುದರ ಮೂಲಕ ತಿರಸ್ಕರಿಸಿರುವ ಅಂಶಗಳನ್ನು ತೀರ್ಮಾನಿಸಿ ನಿರ್ಣಯಿಸುವುದು ಇಂದು ಅನಿವಾರ್ಯವಾಗಿದೆ.

ಸಮಾಜದಲ್ಲಿ ಸಮತೋಲವನ್ನು ಕಾಪಾಡಬೇಕಾದರೆ ಮೇಲುವರ್ಗದವರ ಮೌಲ್ಯಗಳಿಗಿರುವ ಬೆಲೆಯಂತೆ ದುಡಿಯುವ ವರ್ಗದ ಪುರಾತನ ಸಾಮುದಾಯಿಕ ಮೌಲ್ಯಗಳಿಗೆ ಸಮಾನತೆಯನ್ನು ನೀಡಬೇಕಾಗಿದೆ. ಇಲ್ಲಿ ಹಿಂದಿನಿಂದ ನಿರ್ಮಾಣವಾಗಿರುವ ನಂಬಿಕೆ, ಆಚರಣೆ, ಸಂಸ್ಕಾರಗಳನ್ನು ಕೆಡುವುದರ ಜೊತೆಯಲ್ಲಿಯೇ ಕಟ್ಟುವ ಕ್ರಿಯೆಯೂ ಇರುತ್ತದೆ. ಹೊಸದಾಗಿ ಕಟ್ಟುವುದರ ಮೂಲಕ ಸಮುದಾಯಗಳ ಜೀವನದಲ್ಲಿರುವ ಅಗೋಚರ ಪ್ರೀತಿಯನ್ನ ಅನಂತ ಸಾಧ್ಯತೆಗಳನ್ನು ಬೆಳಗಿಸುವುದರ ಮೂಲಕ ಎಲ್ಲ ದುಡಿಯುವ ವರ್ಗದ ಬದುಕಿಗೆ ಬೆಳಕನ್ನು ನೀಡುವುದರ ಮೂಲಕ ವೈಚಾರಿಕತೆ ಹಾಗೂ ರಾಜಕೀಯ ಪ್ರಜ್ಞೆಯೊಂದಿಗೆ ಕೂಡಿಸಿ ನವೀನ ಸಮಾಜದ ಸಮಸ್ಯೆಗಳನ್ನು ಮುಖಾ–ಮುಖಿ ಮಾಡಲು ಬಳಸುವ ಹೊಸ ಸಮಾಜವಾದಿ ಸಮಾಜವನ್ನು ಕಟ್ಟುವ ಪ್ರಯತ್ನ ಪ್ರತಿಸಂಸ್ಕೃತಿಯ ಪರಿಕಲ್ಪನೆಯ ಹಿಂದಿದೆ.

**ಉಪಸಂಸ್ಕೃತಿ :**

ಮನುಷ್ಯ ವಾಸಿಸುವ ಕಡೆಯಲ್ಲಾ ಸಂಸ್ಕೃತಿ ವ್ಯಾಪಕವಾಗಿರುತ್ತವೆ. ಏಕೆಂದರೆ ಸಂಸ್ಕೃತಿ ಎಂಬುದು ಮನುಷ್ಯ ಸಮಾಜದ ಪ್ರತಿಬಿಂಬ. ಅದು ಒಂದು ಸಾಂಕೇತಿಕ ಗುರುತು. ಒಂದೊಂದು ಪ್ರದೇಶಕ್ಕೂ ಅದರದೇ ಆದ ವಿಶಿಷ್ಟತೆ, ವಿನ್ಯಾಸಗಳಿರುತ್ತವೆ. ಆದ್ದರಿಂದ ಇದನ್ನು ವಿಶಿಷ್ಟವಾದೊಂದು ಸಂಸ್ಕೃತಿ ಎನ್ನಬಹುದು. ಈ ಪರಿಕಲ್ಪನೆಯನ್ನು ಫ್ರಾನ್ಜ್ ಬೋಯಸ್ ಎಂಬ ಮಾನವಶಾಸ್ತ್ರಜ್ಞ ಮಂಡಿಸಿದರು. ಇವರ ಪ್ರೇರಣೆಯಿಂದ ಬರಗೂರು ರಾಮಚಂದ್ರಪ್ಪ

ಉಪಸಂಸ್ಕೃತಿ ಎಂಬ ವಿಶಿಷ್ಟ ಪರಿಕಲ್ಪನೆಯನ್ನು, ಸಂಸ್ಕೃತಿಯನ್ನ ಅರ್ಥಮಾಡಿಕೊಳ್ಳುವ ಸಂದರ್ಭದಲ್ಲಿ ರೂಪಿಸಿದರು.

"ಪ್ರಧಾನ ಸಂಸ್ಕೃತಿಯು ಯಾವುದೇ ಒಂದು ದೇಶ-ಪ್ರದೇಶದ ಜೀವನ ವಿಧಾನವಾಗಿರುವಾಗ ಇದಕ್ಕೆ ಹೊರತಾಗಿ ಅಥವಾ ಪ್ರಧಾನನೆಲೆಯಿಂದ ನಿರ್ಲಕ್ಷಿತವಾಗಿ ಬದುಕುತ್ತಿರುವ ಸಂಸ್ಕೃತಿಗಳು ಉಪಸಂಸ್ಕೃತಿ."[೧೦]

ಅಕ್ಷರಸ್ತ ಸಮುದಾಯ ರೂಪಿಸಿರುವ ಸಂಸ್ಕೃತಿಯಲ್ಲಿರುವ ಅಸಮಾನತೆಯನ್ನು ನಿವಾರಿಸಿ, ನಿರ್ಣಯಿಸಲು ಪರ್ಯಾಯ ಸಂಸ್ಕೃತಿಗಳಾಗಿ ಪ್ರತಿ ಸಂಸ್ಕೃತಿ ಮತ್ತು ಉಪಸಂಸ್ಕೃತಿಗಳು ನಿರ್ಮಾಣವಾಗಿವೆ. ಆದ್ದರಿಂದ ಇಂದಿನ ಜಾಗತೀಕರಣ ಹಾಗೂ ಅನ್ಯ ಸಂಸ್ಕೃತಿಗಳ ಪ್ರಭಾವದಿಂದ ಮೂಲಸಂಸ್ಕೃತಿಗಳನ್ನು ರಕ್ಷಿಸುವ, ಉಳಿಸುವ ಜವಾಬ್ದಾರಿ ಎಲ್ಲರ ಮೇಲಿದೆ.

ಒಟ್ಟಾರೆಯಾಗಿ ಇಂದಿನ ಜಾಗತೀಕರಣ ತರುತ್ತಿರುವ ಏಕಾಕೃತಿ ಗ್ರಾಹಕ ಸಂಸ್ಕೃತಿ ಮತ್ತು ಕೋಮುವಾದಿಗಳು ವ್ಯಾಖ್ಯಾನಿಸುತ್ತಿರುವ ಸನಾತನ ಸಂಸ್ಕೃತಿಯ ಏಕಾಕೃತಿ ಇವುಗಳಿಗೆ ಪ್ರತ್ಯೇಕ ನೆಲೆಗಳಿಂದ ಪರ್ಯಾಯ ಕಂಡುಕೊಳ್ಳಬೇಕಾದ್ದು ಇಂದಿನ ಅವಶ್ಯಕತೆ. ಈ ಹಿನ್ನೆಲೆಯಲ್ಲಿ ಲಂಕೇಶರು ಸಮಾಜದ ಒಬ್ಬ ಹಿತಚಿಂತಕನಾಗಿ ತನ್ನದೇ ವಿದ್ವತ್ತು ಮತ್ತು ವಿವೇಕಗಳಿಂದ ತನ್ನ ಸಮಕಾಲೀನ ಘಟನೆಗಳಿಗೆ ಪ್ರತಿಕ್ರಿಯಿಸಿದ ಪರಿ ವಿಶಿಷ್ಟ ಮತ್ತು ವಿಭಿನ್ನವಾದುದಾಗಿದೆ. ಆದ್ದರಿಂದ ಜಾಗತಿಕ ಗ್ರಾಹಕ ಸಂಸ್ಕೃತಿ ಮತ್ತು ಕೋಮುವಾದಿ ಸಂಸ್ಕೃತಿಯ ವಿರೋಧಿ ನೆಲೆಯಲ್ಲಿ ನಿಂತು ಸಮಕಾಲೀನ ಸಮಸ್ಯೆಗಳಿಗೆ ಉತ್ತರಿಸಿದ್ದಾರೆ. ಆದ್ದರಿಂದ ಲಂಕೇಶ್‌ರ ಸಾಹಿತ್ಯದಲ್ಲಿ ಕಂಡುಬರುವ ಕೋಮುವಾದಿ ವಿರೋಧಿ ಸಂಸ್ಕೃತಿಯನ್ನು ಗುರುತಿಸುವುದು ನನ್ನ ಈ ಅಧ್ಯಯನದ ಉದ್ದೇಶವಾಗಿದೆ.

ಲಂಕೇಶರು ಸಂಸ್ಕೃತಿಯ ಬಗ್ಗೆ ಎಲ್ಲೂ ವ್ಯಾಖ್ಯಾನವನ್ನು ಮಾಡಿಲ್ಲ. ಒಬ್ಬ ಸಾಹಿತಿಯಾಗಿ ತನ್ನ ಸಮಕಾಲೀನ ಸಾಮಾಜಿಕ ಕ್ರಿಯೆಗಳಿಗೆ ಸಾಂಸ್ಕೃತಿಕವಾಗಿ ಪ್ರತಿಕ್ರಿಯೆಯನ್ನು ವ್ಯಕ್ತಪಡಿಸಿದವರಲ್ಲಿ ಲಂಕೇಶರು ಅಗ್ರಗಣ್ಯರು. ತಮ್ಮ ಸಾಹಿತ್ಯ ರಚನೆಯಲ್ಲಿ ಅನೇಕ ಸಾಂಸ್ಕೃತಿಕ ಅಂಶಗಳನ್ನು ಇತಿಹಾಸ ಮತ್ತು ವರ್ತಮಾನದ ಪರಿಧಿಯೊಳಗೆ ಗುರುತಿಸಿರುವುದನ್ನು ಅವರ ಟೀಕೆ-ಟಿಪ್ಪಣಿಗಳಲ್ಲಿ ಗಮನಿಸಬಹುದಾಗಿದೆ. ಲಂಕೇಶರ ಸಂಸ್ಕೃತಿಯನ್ನು ಕುರಿತ ದೃಷ್ಟಿಕೋನವು ಬಹುಮುಖತ್ವದ ಕಡೆಗಿರುವುದನ್ನು ಗುರುತಿಸಬಹುದಾಗಿದೆ. ಕ್ವಚಿತ್ತಾಗಿ ಬೇರೆ ಬೇರೆ ಲೇಖನಗಳಲ್ಲಿ ಉಲ್ಲೇಖಿತವಾಗಿರುವ ಸಂದರ್ಭ, ಸಂಗತಿಗಳನ್ನು ಗಮನಿಸಿ ಅವರ 'ಸಂಸ್ಕೃತಿ' ನಿರ್ವಚನವನ್ನು ಮುಂದೆ ಕಂಡುಕೊಳ್ಳಲಾಗಿದೆ.

- 'ಬೈರೂತ್ ಬೇಗೆಯಲ್ಲಿ ತಣ್ಣನೆ ಹನಿ' ಎಂಬ ಲೇಖನದಲ್ಲಿ "ಒಂದು ದೀರ್ಘ ಪ್ರಾಚೀನ ಸಂಸ್ಕೃತಿಯ ನಾಡಿನ ಹೃದಯವನ್ನು ಪೂರ್ತಿ ನಾಶಮಾಡುವುದು ಯಾವ

ರಾಕ್ಷಸರಿಗೂ ಸಾಧ್ಯವಿಲ್ಲ"[೧೧] ಎನ್ನುತ್ತಾರೆ. ಸಂಸ್ಕೃತಿ ಎಂಬುದು ನಿಂತ ನೀರಲ್ಲ, ಅದು ಸದಾ ಹರಿಯುತ್ತಾ ತನ್ನ ಜೊತೆಯಲ್ಲಿ ಹೊಸತನ್ನ ಸೇರಿಸಿಕೊಳ್ಳುವ ಒಂದು ಜೀವಂತ ನದಿ. ಹಾಗೆಯೇ ಜೀವಂತವಾಗಿರುವ ಸಂಸ್ಕೃತಿಯಲ್ಲಿ ಶ್ರೇಷ್ಟವಾದ ಮೌಲ್ಯಗಳಿರುತ್ತವೆ. ಪ್ರಾಚೀನ ನಾಗರೀಕತೆಯನ್ನು ಹೊಂದಿರುವ ಸಂಸ್ಕೃತಿಗೆ ಬೇರೊಂದು ಸಂಸ್ಕೃತಿಯನ್ನು ಸಲಹುವ, ಸಾಂತ್ವಾನ ಹೇಳುವ ಗುಣವಿರುತ್ತದೆ. ಲೆಬನಾನ್ ದೇಶ ಅಪೂರ್ವ ಪ್ರಕೃತಿ ಸೌಂದರ್ಯ ಮತ್ತು ಅಖಂಡ ಸಂಸ್ಕೃತಿಯ ಚಿಕ್ಕ ದೇಶ. ಇಲ್ಲಿ ಎಲ್ಲಾ ಧರ್ಮೀಯರೂ ವಾಸಿಸುತ್ತಿದ್ದಾರೆ. ಇಲ್ಲಿ ಎಂದೂ ಜಾತಿ ಜಗಳವಾಗಿರಲಿಲ್ಲ. ಇಸ್ರೇಲ್ ರಾಷ್ಟ್ರದ ಸಂಪರ್ಕದಿಂದ ಜಗಳಗಳು ಉಂಟಾದವು. ಯುದ್ಧ, ಸಾವು ನೋವುಗಳಿಂದ ಜನ ದೇಶ ಬಿಟ್ಟು ಹೋಗುತ್ತಿರುತ್ತಾರೆ. ಆಗ ರೀಮಾ ಶಹದೆ ಮತ್ತು ಈಕೆಯ ಗಂಡ ವೈದ್ಯ ಗಾಯಾಳುಗಳ ಆರೈಕೆ ಮಾಡುತ್ತಾನೆ. ಕ್ರಿಸ್‌ಮಸ್ ಹಬ್ಬದ ಸಮಯದಲ್ಲಿ ಹತ್ತು ದಿನಗಳ ಕಾಲ ತನ್ನ ಮನೆಯನ್ನು ಮುಕ್ತವಾಗಿಡುತ್ತಾಳೆ, ಇದರಿಂದ ಅನೇಕ ಜನರು ಒಂದು ಕಡೆ ಸೇರುತ್ತಾರೆ. ಆಗ ಅವರಲ್ಲಿ ಪ್ರೀತಿ, ವಿಶ್ವಾಸ, ಸ್ನೇಹ ಮೊಳೆತು ಪುನಃ ಈ ನಗರ ಶಾಂತವಾಗಿ ಉಳಿಯುತ್ತದೆ. ಇಲ್ಲಿ ಲಂಕೇಶರು ದೀರ್ಘ ಮತ್ತು ಪ್ರಾಚೀನ ನಾಡಿನ ಸಂಸ್ಕೃತಿಯ ಆತ್ಮ ನಾಶ ಸಾಧ್ಯವಿಲ್ಲ ಎಂಬ ನಿಲುವಿಗೆ ಬರುತ್ತಾರೆ.

- 'ಕುದುರೆ ಏರಿ ಹೊರಟ ಸರದಾರ' – ಎಂಬ ಲೇಖನದಲ್ಲಿ "ಅರಮನೆಯಲ್ಲಿ ಬೀಗಿದವರೆಲ್ಲ ಇತಿಹಾಸದ ಉಸುಬಿನಲ್ಲಿ ಕಣ್ಮರೆಯಾಗಿದ್ದಾರೆ; ಮಣ್ಣುಗೂಡಿದ್ದಾರೆ. ಎಲ್ಲೋ ದಾಸರಾಗಿದ್ದವರು, ಕಾಡಿನಲ್ಲಿ ಅಲೆದಾಡುತ್ತಿದ್ದವರು ಯಾವುದೋ ಜಾಡು ಹಿಡಿದು ನಡೆದ ಶಿಶುನಾಳರು ಇಲ್ಲಿ ನಮ್ಮ ಮನದಲ್ಲಿ ಸಂಚರಿಸುತ್ತಾರೆ. ದೇಶ ವ್ಯಕ್ತಿ, ಸಂಸ್ಕೃತಿಗಳೆಲ್ಲ ಹೀಗೆ!" ಎನ್ನುವ ಮಾತಿದೆ. ಒಂದು ಪ್ರದೇಶದ ಪ್ರಾಚೀನ ಸಂಸ್ಕೃತಿ ಅಲ್ಲಿನ ಜನರ ನಂಬಿಕೆ, ಆಚರಣೆಗಳಿಂದ ಕೂಡಿರುತ್ತದೆ. ಹೊಸ ನಾಗರೀಕತೆಯ ಪ್ರಭಾವ ಎಷ್ಟೇ ಉಂಟಾದರೂ ಸಹ ಅನುಭವ ಜ್ಞಾನ ಸಂಸ್ಕೃತಿ ನಾಶವಾಗುವುದಿಲ್ಲ. ಹಾಗೆಯೇ ಶ್ರೀಮಂತಿಕೆಯಿಂದ, ಅಹಂಕಾರದಿಂದ ಮೆರೆದವರನ್ನು ಎಂದೂ ಗೌರವಿಸುವುದಿಲ್ಲ. ಸಮಾಜದಲ್ಲಿ ಸಮಾನತೆ ಇದ್ದಾಗ ಮಾತ್ರ ಸಂಸ್ಕೃತಿಯ ಆರಾಧನೆಯೂ, ಗೌರವವೂ ಇರುತ್ತದೆ. ಇಲ್ಲಿ ಲಂಕೇಶರ ಪ್ರಕಾರ ಸಂಸ್ಕೃತಿ ರೂಪುಗೊಳ್ಳುವುದು, "ಸಂಸ್ಕೃತಿ ಎಂಬುದು ವಿಚಿತ್ರ, ವಿಪರ್ಯಾಸಮಯ ಅನುಭವಗಳಿಂದ ರೂಪುಗೊಳ್ಳುವುದೇ ಹೊರತು ಕೃತಕವಾದ ವರ್ತನೆಯಿಂದಲ್ಲ."
- 'ಎಲ್ಲಾ ದೇವರ ಹೆಸರಲ್ಲಿ' – ಎಂಬ ಲೇಖನದಲ್ಲಿ "ನಾನು ಹಿಂದೂ ನನ್ನ ಹಿಂದೂತ್ವವನ್ನು ಕಿತ್ತುಕೊಳ್ಳುವುದು ಯಾರಿಂದಲೂ ಸಾಧ್ಯವಿಲ್ಲ ಅಂದರು ಗಾಂಧೀ. ನಾನು ಪಕ್ಕಾ ಹಿಂದೂ ಆದ್ದರಿಂದಲೇ ಶಾಂತಿ, ಅಹಿಂಸೆ, ಪ್ರೀತಿಯ ಮಾತಾಡುವುದು

ಸಾಧ್ಯವಾಗುತ್ತದೆ.''[೧೨] ಎಂಬ ಗಾಂಧಿಯವರ ನಿಲುವನ್ನು ಲಂಕೇಶ್ ಉಲ್ಲೇಖಿಸುತ್ತಾರೆ. ಭಾರತದಲ್ಲಿ ಅನೇಕ ಜಾತಿಗಳ ಜನರಿದ್ದು ಇವರ ಚಟುವಟಿಕೆಗಳು ವಿಭಿನ್ನವಾಗಿರುತ್ತವೆ. ಬದುಕು ತುಂಬಾ ಸಂಕೀರ್ಣವಾದದ್ದು, ಇಲ್ಲಿ ಬಳಸುವ ಮತ್ತು ತಯಾರಿಸುವ ವಸ್ತುಗಳು ಬೇರೆ ಬೇರೆಯಾಗಿರುತ್ತವೆ. ಪ್ರತಿಯೊಬ್ಬರೂ ಸಹ ಬೇರೆ ಧರ್ಮಗಳ ಮೌಲ್ಯಗಳನ್ನು ಪ್ರೀತಿಸುತ್ತಾ ತನ್ನ ಧರ್ಮದ ಮೌಲ್ಯಗಳನ್ನು ರಕ್ಷಿಸಬೇಕು. ಆದ್ದರಿಂದ ಇಲ್ಲಿ ಲಂಕೇಶರು ಸಂಸ್ಕೃತಿಯ ಒಡಲೊಳಗೆ ಪ್ರತಿರೋಧ ಸಾಧ್ಯವಿದೆ ಎಂಬ ನಂಬಿಕೆಯನ್ನು ವ್ಯಕ್ತಪಡಿಸುತ್ತಾರೆ.

- 'ಜಾಗೃತ ಸಾಹಿತ್ಯ ಸಮಾವೇಶದ ಉದ್ಘಾಟನಾ ಭಾಷಣ' – ಎಂಬ ಲೇಖನದಲ್ಲಿ ''ಪ್ರತಿಯೊಂದು ರಾಜ್ಯವೂ ತನ್ನದೇ ಸ್ಫೂರ್ತಿಯಿಂದ ತನ್ನದೇ ಕುಶಲತೆಯಿಂದ ಪ್ರಗತಿ ಸಾಧಿಸಿದರೆ ಭಾರತ ಒಟ್ಟಾರೆಯಾಗಿ ಅದ್ಭುತ ರಾಷ್ಟ್ರವಾಗಬಲ್ಲದು.''[೧೩] ಎಂಬ ನಿಲುವು ತಳೆಯುತ್ತಾರೆ. ಒಂದು ಪ್ರದೇಶ ಅಥವಾ ಒಂದು ರಾಷ್ಟ್ರ ಅಭಿವೃದ್ಧಿಯನ್ನು ಹೊಂದಬೇಕಾದರೆ ಸಂಪೂರ್ಣ ಹೊಣೆಗಾರಿಕೆ ಆ ಜನರ ಮತ್ತು ಅಲ್ಲಿನ ವ್ಯವಸ್ಥೆಯದ್ದಾಗಿರುತ್ತದೆ. ಭಾರತ ಸ್ವತಂತ್ರಾ ನಂತರ ಆಧುನಿಕತೆಗೆ ಹೊಂದಿಕೊಳ್ಳುವುದಕ್ಕಾಗಿ ಹಾತೊರೆಯುತ್ತಿತ್ತು. ಭಾರತವನ್ನ ಒಂದು ಘಟಕವಾಗಿ ಅಭಿವೃದ್ಧಿ ಪಡಿಸುವುದು ಕಷ್ಟಕರವಾದುದು. ಭಾಷೆಯ, ಪ್ರಾಂತ್ಯದ, ಜನಾಂಗದ ಆಧಾರದಿಂದ ವಿಂಗಡಿಸಿದರೆ ಅಭಿವೃದ್ಧಿ ಸಾಧ್ಯ. ಅಭಿವೃದ್ಧಿಯನ್ನ ಸಾಧಿಸುವ ನಿಟ್ಟಿನಲ್ಲಿ ಸರ್ಕಾರ ಈ ಅಂಶಗಳಿಗೂ ಗಮನವನ್ನ ನೀಡುವುದು ಮುಖ್ಯವಾದುದು. ಈ ಲೇಖನದಲ್ಲಿ ಲಂಕೇಶರ ಒಂದು ರಾಷ್ಟ್ರದ ಅಭಿವೃದ್ಧಿ ನಿಜವಾದ ಸಾಂಸ್ಕೃತಿಕ ಕ್ರಾಂತಿ ಸಾಧ್ಯವಾಗುವುದು ವಿಕೇಂದ್ರಿಕರಣದಿಂದ ಎನ್ನುವ ನಿಲುವನ್ನು ವ್ಯಕ್ತಪಡಿಸುತ್ತಾರೆ.

- 'ಜಾಗೃತ ಸಾಹಿತ್ಯ ಸಮಾವೇಶದ ಉದ್ಘಾಟನಾ ಭಾಷಣ' –ಎಂಬ ಲೇಖನದಲ್ಲಿ ''ಡಾ. ಅಂಬೇಡ್ಕರ್ ಕೇವಲ ರಾಜಕೀಯ ವಿಷಯ ಮಾತನಾಡಲಿಲ್ಲ: ಅವರು ಸಾಹಿತ್ಯದ ಮೂಲಗಳ ಬಗ್ಗೆ, ಸಂಸ್ಕೃತಿಯ ಬಗ್ಗೆ ಮಾತನಾಡಿದರು.''[೧೪] 'ರವಿ ಕಾಣದನ್ನ ಕವಿ ಕಂಡ' ಎಂಬ ಮಾತಿದೆ. ಒಬ್ಬ ಕವಿಯಾದವನಿಗೆ ತನ್ನ ಸಮಕಾಲೀನ ವ್ಯವಸ್ಥೆಯ ಆಯಾಮಗಳ ಬಗ್ಗೆ ಅರಿವಿರುತ್ತದೆ. ಸಮಾಜದ ಬದಲಾವಣೆಯಲ್ಲಿ ಕವಿಗಳ ಪಾತ್ರ ಹಿರಿಯದು. ಅಂಬೇಡ್ಕರ್, ಗಾಂಧಿಯಂಥ ಸಮಾಜ ಸುಧಾರಕರು ಅಸಹಾಯಕ ಜನತೆಯ ನೋವಿನ ಧ್ವನಿಯಾಗಿ ಅಲ್ಲಿ ರಾಜಕೀಯ ಸುಧಾರಣೆಯನ್ನಷ್ಟೆ ಮಾಡಲಿಲ್ಲ. ಜನರ ನಿಜವಾದ ಸಮಸ್ಯೆಗಳನ್ನು ಅರಿತು ವಿಶ್ಲೇಷಿಸಿದರು. ಸಾಹಿತ್ಯದ ಮೂಲಕ ಜನರನ್ನು ತಲುಪುವುದನ್ನು ಕಂಡುಕೊಂಡರು. ಇವರ ರಾಜಕೀಯ ಸಭೆಗಳು ಅಲ್ಲಿನ ಜನರ ಸಾಹಿತ್ಯ ಸಂಸ್ಕೃತಿಯನ್ನ ಪ್ರತಿಬಿಂಬಿಸುತ್ತಿದ್ದವು. ಇಲ್ಲಿ ಲಂಕೇಶರು ಒಬ್ಬ

ಮನುಷ್ಯನ ಘನತೆ, ಆತ್ಮ ಗೌರವಗಳು ರಾಜಕೀಯ ಮತ್ತು ಸಾಂಸ್ಕೃತಿಕ ಪಾಲುದಾರಿಕೆಯೊಂದಿಗೆ ಬೆಸೆದುಕೊಕೊಂಡಿವೆ ಎಂಬ ಅಭಿಪ್ರಾಯವನ್ನು ಹೊಂದಿದ್ದಾರೆ.

- 'ಹಿಡಿದ ಕೊಡಲಿಯ ಹಿಂದೆ' – ಎಂಬ ಲೇಖನದಲ್ಲಿ "ಏನನನ್ನೂ ಪಡೆಯದೆ ಎಲ್ಲವನ್ನೂ ನೀಡುವ ಈ ಮರ ಮನುಷ್ಯನ ನಿರ್ಲಕ್ಷ್ಯಕ್ಕೆ ಒಳಗಾಗುವುದು, ಮನುಷ್ಯನ ದುರಾಸೆಯ ಜಗತ್ತಿನಲ್ಲಿ ಸ್ಥಾನವನ್ನೇ ಪಡೆಯದೆ ಇರುವುದು ಸಹಜ"[೧೫] ಎನ್ನುತ್ತಾರೆ. ಆಧುನಿಕ ನಾಗರೀಕತೆ ಕೇವಲ ಹಣಗಳಿಕೆಯ ಕಡೆಗೆ ಹರಿಯುತ್ತಿದೆ. ಇದರಿಂದ ಪರಿಸರ ನಾಶವಾಗಿ ಅಸಮತೋಲನ ಉಂಟಾಗುತ್ತಿದೆ. ಮಳೆಯ ಪ್ರಮಾಣ ಕಡಿಮೆಯಾಗುತ್ತಿರುವ ಸಂದರ್ಭದಲ್ಲಿ ಲಂಕೇಶರು ಮನುಷ್ಯನ ನೀಚತನವನ್ನು ಗುರುತಿಸಿದ್ದಾರೆ. ಒಂದು ಅರಳಿಮರದ ಎದುರು ಮನುಷ್ಯ ಎಷ್ಟು ದುರ್ಬಲ, ಮರಕಡಿಯುವುದು ಅಥವಾ ಬೆಳೆಸುವುದು ದೊಡ್ಡದಲ್ಲ. ಈ ಕ್ರಿಯೆಯ ಹಿಂದಿರುವ ಮನಸ್ಸು ಎಷ್ಟು ವಿಚಿತ್ರವಾದುದು. ಈ ಮರಕ್ಕೆ ನೀರು ಗೊಬ್ಬರ ಹಾಕಿ ಆರೈಕೆ ಮಾಡಿದವರಿಲ್ಲ. ಮರ ಆಕ್ರಮಿಸಿಕೊಂಡಿರುವ ಜಾಗದ ಬಗ್ಗೆ ಆರ್ಥಿಕತೆಯಿಂದ ಯೋಚಿಸುತ್ತಿದ್ದಾರೆ. ಈ ಮರದ ಕೆಳಗೆ ವಿಶ್ರಮಿಸುವ ಜನ, ಇಲ್ಲಿ ಕುಳಿತು ಮಾತನಾಡುವುದು ಸಂಪ್ರದಾಯ, ಮರದ ನೆರಳಿನಲ್ಲಿ ಕುಳಿತು ತಪಸ್ಸು ಮಾಡಿ ಜ್ಞಾನ ಪಡೆದ ತಪಸ್ವಿಗಳಿದ್ದಾರೆ. ಒಟ್ಟಾರೆ ಈ ಅರಳಿಮರ ಒಂದು ದೇವರ ಅಮೂರ್ತ ಶಕ್ತಿಯಾಗಿತ್ತು. ಆದರೆ ಇಂದು ಈ ಎಲ್ಲಾ ಪಾರಂಪರಿಕ ಮೌಲ್ಯಗಳು ಮರೆಯಾಗುತ್ತಿವೆ ಎನ್ನುವಾಗ ಲಂಕೇಶರು ಆರ್ಥಿಕತೆಯ ನೆಲೆಯಲ್ಲಿ ಯೋಚಿಸುವವರಿಗೆ ಸಂಸ್ಕೃತಿಯ ಭಾವನಾಮಯ ವಾತಾವರಣ ಅರ್ಥವಾಗಲಾರದು ಎಂಬ ತೀರ್ಮಾನಕ್ಕೆ ಬರುತ್ತಾರೆ.

- 'ರೈತನೊಬ್ಬನ ಕ್ರಾಂತಿ: ಹುಲುಕಡ್ಡಿಯ ಪವಾಡ' – ಎಂಬ ಲೇಖನದಲ್ಲಿ "ರೈತನಿಗೆ ಕೃಷಿ ಮುಖ್ಯವೆಂಬುದು ನಿಜ; ಆದರೆ, ಎಲ್ಲರಂತೆ ಆತನಿಗೆ ಸಾಹಿತ್ಯ, ಸಂಸ್ಕೃತಿಯ ಆಸ್ವಾದನೆ ಕೂಡ ಮುಖ್ಯ. ತತ್ವಜ್ಞಾನಿಯಾಗುವುದು ಬದುಕಿನಲ್ಲಿ ಸಾರ್ಥಕತೆ ಪಡೆಯುವುದು ಮುಖ್ಯ; ಆರೋಗ್ಯವಂತ ದೇಹ ಮನಸ್ಸು ಪಡೆದು ಕ್ರೌರ್ಯ, ಸ್ವಾರ್ಥದಿಂದ ಮುಕ್ತವಾಗಿ ಸೂಕ್ಷ್ಮಜ್ಞನೂ ಸುಸಂಸ್ಕೃತನೂ ಆಗುವುದು ಮುಖ್ಯ"[೧೬] ಎನ್ನುತ್ತರೆ. ಜಪಾನಿನ ಕೃಷಿಕ್ರಾಂತಿಯ ಹರಿಕಾರನಾದ ಪುಕುವೋಕಾ ಆಧುನಿಕ ವ್ಯವಸಾಯದ ವಿಧಾನದ ತೊಂದರೆಗಳನ್ನು ಗಮನಿಸಿ ನೈಸರ್ಗಿಕ ಕೃಷಿಗೆ ಮಹತ್ವವನ್ನು ನೀಡಿದನು. ಭೂಮಿಯನ್ನ ಆಳವಾಗಿ ಉಳುಮೆ ಮಾಡುವುದು ಅದರ ಫಲವತ್ತತೆಯನ್ನು ಕಡಿಮೆ ಮಾಡಿದಂತೆ. ಭೂಮಿಯ ಐಕ್ಯತೆಯನ್ನು ಛಿದ್ರಗೊಳಿಸಿದಂತೆ ಒಂದು ರೀತಿಯಲ್ಲಿ ಭೂಮಿಯ ಮೇಲೆ ಮಾಡುವ ಶೋಷಣೆಯಂತಿರುತ್ತದೆ. ಆಧುನಿಕ ವ್ಯವಸಾಯ ಕ್ರಮ ಪರಿಸರ ಮಾಲಿನ್ಯತೆಯ ಕಡೆಗೆ ಹರಿಯುತ್ತಿದೆ. ಈ ಪದ್ಧತಿ ವಿಕೃತ, ಹಿಂಸೆ,

ದಬ್ಬಾಳಿಕೆಯನ್ನ ಮಾಡುತ್ತಿರುವಂತಿದೆ ಎಂದು ನೈಸರ್ಗಿಕ ಕೃಷಿಯ ಕ್ರಾಂತಿಯನ್ನ ಉಂಟುಮಾಡಿ ಸಹಜ ಕೃಷಿಯ ಶೋಧಕನಾದವನು. ಇಲ್ಲಿ ಲಂಕೇಶರು ಸಂಪತ್ತಿನ ಸಂಗ್ರಹಣೆಯೇ ಮನುಷ್ಯಜೀವನದ ಉದ್ದೇಶವಲ್ಲ ಸಂಸ್ಕೃತಿಯೂ ಮುಖ್ಯ ಎಂಬ ತೀರ್ಮಾನಕ್ಕೆ ಬಂದಿದ್ದಾರೆ.

- ಮನುಷ್ಯ ಸೃಷ್ಟಿ ಕ್ರಿಯೆಯಲ್ಲಿಯೇ ಅತ್ಯಂತ ಬುದ್ಧಿವಂತ ಹಾಗೂ ಒಳಿತು ಕೆಡುಕನ್ನು ಆಲೋಚಿಸುವ ಜೀವಿ. ಈತನ ಸಾಮಾಜಿಕ ಪ್ರಜ್ಞೆ ಮತ್ತು ಪರಿಸರದಲ್ಲಿ ಎಲ್ಲಿಯೂ ಸಹ ಸಂಘರ್ಷಕ್ಕೆ ಅವಕಾಶವಿರಬಾರದು. ನಂಬಿಕೆ ಮತ್ತು ಪ್ರಾಮಾಣಿಕತೆಗೆ ಮಹತ್ವ ಮತ್ತು ಅಗತ್ಯವಿರಬೇಕು. ತನ್ನ ಪರಿಸರ ಮತ್ತು ಧರ್ಮದ ಬಗ್ಗೆ ಪ್ರೀತಿ ಇರಬೇಕು. ಪ್ರತಿಯೊಬ್ಬರಿಗೂ ಕರ್ತವ್ಯ ಪ್ರಜ್ಞೆ ಇರಬೇಕು. ಕಣ್ಮರೆಯಾದ ಪ್ರಿಯದರ್ಶಿನಿ ಲೇಖನದಲ್ಲಿ ಶ್ರೀಮತಿ ಇಂದಿರಾ ಗಾಂಧೀಯವರನ್ನ ಕೊಂದ ಸಿಖ್ ಬಿಯಾಂತ್ ಸಿಂಗ್ ಧರ್ಮದ ಬಗ್ಗೆ ಪ್ರೀತಿ ಹೆಚ್ಚಿ ತಾನು ರಕ್ಷಿಸಬೇಕಾದ ನಾಯಕಿಯನ್ನೇ ಕೊಂದ ಇಂತಹ ದೇಶದ್ರೋಹಿ ಮತ್ತು ಆತ್ಮದ್ರೋಹಿಗಳಿಗೆ ದೇಶ ಸರ್ಕಾರ, ಪ್ರಾಮಾಣಿಕತೆಯ ಕಲ್ಪನೆ ಇರಲಾರದು. ಈ ಪ್ರಶ್ನೆ ಒಂದು ಸಂಸ್ಕೃತಿಯ ಪ್ರಶ್ನೆ, ತೀರಾ ವೈಯಕ್ತಿಕ ಮೌಲ್ಯಗಳ ಪ್ರಶ್ನೆ[೧೭] ಎನ್ನುತ್ತಾರೆ. ಈ ಜಗತ್ತಿನಲ್ಲಿ ಜಾತಿಯ ಹೆಸರಿನಲ್ಲಿಯೇ ಅತ್ಯಂತ ಹೆಚ್ಚು ರಕ್ತ ಹರಿದಿದೆ. ಈ ಕೊಲೆ ಧಾರ್ಮಿಕ ಕುರುಡುತನದ ಸಂಕೇತ. ಆದ್ದರಿಂದ ಲಂಕೇಶರ ದೃಷ್ಟಿಯಲ್ಲಿ ಧಾರ್ಮಿಕ ಸಂಸ್ಕೃತಿಯು ಜೀವಮಾರಕವಾಗಬಲ್ಲದು ಎಂಬ ನಂಬಿಕೆ ಇದೆ.

- 'ದೇವರನ್ನು ಕುರಿತು ಲೇಖನದಲ್ಲಿ' "ದೇವಾಲಯಗಳು ನಮ್ಮ ಜನರ ಭಕ್ತಿಯ ಕೇಂದ್ರಗಳು ಮನಸ್ಸಿಗೆ ಶಾಂತಿ, ನೆಮ್ಮದಿ ಸಿಗಲೆಂದು ಈ ಜಾಗಕ್ಕೆ ಬರುತ್ತಾರೆ. ಇಲ್ಲಿ ಎಲ್ಲಾ ಜಾತಿಯ ಜನರೂ ಸೇರುತ್ತಾರೆ. ಒಂದಾಗುತ್ತಾರೆ ಪರಸ್ಪರ ತಮ್ಮ ಅನಿಸಿಕೆಗಳನ್ನು ಹಂಚಿಕೊಳ್ಳುತ್ತಾರೆ. ನಮ್ಮ ಜನರ ಬದುಕಿನ ಅಂಗಗಳು ಈ ದೇವಾಲಯಗಳು." ಲಂಕೇಶರು ವೈಚಾರಿಕವಾಗಿ ದೇವರು, ದೇವಾಲಯಗಳನ್ನ ವಿರೋಧಿಸುತ್ತಿದ್ದರೂ ಈ ದೇವಾಲಯದಲ್ಲಿರುವ ಒಂದುಗೂಡುವ, ಹಂಚಿಕೊಳ್ಳುವ ಸಂಸ್ಕೃತಿಯನ್ನು ಒಪ್ಪುತ್ತಿದ್ದರು. ಸಂಸ್ಕೃತಿಯನ್ನ ವಿಮರ್ಶೆ ಮಾಡುವುದು, ತಪ್ಪಿಲ್ಲವಾದರೂ ಸಂಸ್ಕೃತಿಯ ಬಗ್ಗೆ ಕುರುಡು ವಿರೋಧ ಸರಿಯಾದುದಲ್ಲ ಎಂಬ ನಿಲುವು ಅವರದು.

- 'ಓಡುತ್ತಿರುವ ಕಲಾವಿದರು' – ಲೇಖನದಲ್ಲಿ ನಮ್ಮ ಸುಂದರ ಬೆಂಗಳೂರು ನಗರ ದಿನೇ ದಿನೇ ಬರಡಾಗುತ್ತಿದೆ. ಕಾರಣ ಆಡಳಿತ ಸರ್ಕಾರ ನಗರದ ಪ್ರಕೃತಿ ಸೌಂದರ್ಯದ ಕಡೆ ಗಮನ ನೀಡುತ್ತಿಲ್ಲ ಎನ್ನುವ ನಿಲುವು ತಳೆಯುತ್ತಾರೆ. ಅವರ ಪ್ರಕಾರ "ಕಲೆ, ಸಾಹಿತ್ಯ, ಆಡಳಿತ, ಅಧಿಕಾರ ಮತ್ತು ಸೌಂದರ್ಯ ಪ್ರತ್ಯೇಕವಲ್ಲ. ಇವೆಲ್ಲವೂ ಒಗ್ಗೂಡಿದಾಗಲೇ ಅದು ಸಂಸ್ಕೃತಿಯಾಗುತ್ತದೆ."[೧೮] ಇಲ್ಲಿ ಲಂಕೇಶರು ಸಂಸ್ಕೃತಿಯು

ಅಧಿಕಾರದಿಂದ, ಆರ್ಥಿಕತೆಯಿಂದ ದೂರವಿರುತ್ತದೆ ಎನ್ನುವ ಅಭಿಪ್ರಾಯವನ್ನು ತಿರಸ್ಕರಿಸುತ್ತಾರೆ.

- 'ಶ್ರೀಮಾನ್ ಜಟ್ಟಿ ಮಹಾಶಯರ ಅವಗಾಹನೆಗೆ' – ಎಂಬ ಲೇಖನದಲ್ಲಿ ಸಂಸ್ಕೃತಿ ಮನುಷ್ಯ ಜೀವನದ ಒಂದು ಭಾಗ. ಈ ಭಾಗವನ್ನು ಮುಂದಿನ ಪೀಳಿಗೆಗೆ ಉಳಿಸಿ – ಬೆಳೆಸಲು ಒಂದು ಜನಾಂಗದ ಆಗತ್ಯವಿದೆ. ಉಚ್ಚವರ್ಗದವರು ಸಂಸ್ಕೃತಿಯ ಬೆಳವಣಿಗೆಯ ಕಡೆಗೆ ಮುಂದುವರೆಯುವುದರ ಕಡೆಗೆ ಅಷ್ಟಾಗಿ ಗಮನ ಕೊಡುವುದಿಲ್ಲ. ಇನ್ನು ಕೆಳ ಜನಾಂಗದವರು ತಮ್ಮ ಹೊಟ್ಟೆ–ಬಟ್ಟೆಯ ಅಗತ್ಯಕ್ಕೆ ಅವರ ಶ್ರಮ, ಸಮಯ ವ್ಯಯವಾಗುತ್ತದೆ. ಲಂಕೇಶರ ದೃಷ್ಟಿಯಲ್ಲಿ ಸಂಸ್ಕೃತಿಯನ್ನು ಉಳಿಸಿ ಬೆಳೆಸುವರು ಮಧ್ಯಮ ವರ್ಗದವರಾದ ಅಧ್ಯಾಪಕರು, ಗುಮಾಸ್ತರು, ಸೇವಕರು ಇತ್ಯಾದಿ ಸಂಸ್ಕೃತಿಯ ಸಂಚಾಲಕರು ಎಂದು ವಾದಿಸುತ್ತಾರೆ. ಲಂಕೇಶರು ಈ ಮಧ್ಯಮ ವರ್ಗವನ್ನು 'ಸಂಪನ್ನರ ಗುಂಪು' ಎಂದು ಕರೆದಿದ್ದಾರೆ.

- 'ಮಣ್ಣುಗೂಡುತ್ತಿರುವ ಹೂಗಳು' –ಎಂಬ ಲೇಖನದಲ್ಲಿ ನಮ್ಮ ಸಮಾಜ ಹಲವಾರು ಜಾತಿ–ಉಪಜಾತಿಗಳಿಂದ, ಧರ್ಮಗಳಿಂದ ಕೂಡಿದೆ. ಒಂದು ಧರ್ಮದ ಗುರು ಅಥವಾ ಪ್ರಧಾನ ವ್ಯಕ್ತಿ ತನ್ನ ಎಲ್ಲಾ ಅರಿಷಡ್ವರ್ಗಗಳನ್ನು ತ್ಯಜಿಸಿ ಸಂತನಂತೆ ಸಮಾಜಕ್ಕೆ ಒಳಿತನ್ನ ಬಯಸುವ ಸಂದರ್ಭದಲ್ಲಿ ಎಲ್ಲರೂ ಆತನಿಗೆ ಗೌರವ, ಪ್ರೀತಿ, ಸ್ನೇಹದಿಂದ ವರ್ತಿಸುತ್ತಾರೆ. ಆದರೆ ಇಂಥವರು ಧರ್ಮವನ್ನ, ಅಧಿಕಾರವನ್ನ ಸ್ವಾರ್ಥಕ್ಕಾಗಿ ಅನೈತಿಕವಾಗಿ ಬಳಸಿಕೊಂಡರೆ ಸಾಮಾನ್ಯ ಜನರಿಗೆ ಧರ್ಮದ ಬಗ್ಗೆ ಅಪನಂಬಿಕೆ, ತಿರಸ್ಕಾರ, ಮೂಡುವುದು ಸಹಜ ಎಂಬ ನಿಲುವನ್ನು ತಳೆಯುತ್ತಾರೆ. ಇರಾನಿನ ಆಯಾ ತೊಲ್ಲಾ ಖೋಮಿನಿಯನ್ನು ಉದಾಹರಿಸುತ್ತಾರೆ. ಲಂಕೇಶರ ಪ್ರಕಾರ ಖೊಮೇನಿ ಮನುಷ್ಯನ ಧರ್ಮದ ಹುಚ್ಚು ಮತ್ತು ಮೂರ್ಖತನಕ್ಕೆ ಸಂಕೇತ ಈ ಖೋಮಿನಿ. ಮೇಲುನೋಟಕ್ಕೆ ಮಹಾತ್ಮನಂತೆ ಕಾಣುವ ಈತ ಅಂತರಂಗತದಲ್ಲಿ ಪಿಶಾಚಿಗೆ ಸಮ."[೧೯] ಜಾತಿ–ಧರ್ಮ ಇತ್ಯಾದಿಗಳನ್ನು ಒಳಗೊಂಡಿರುವ ಸಂಸ್ಕೃತಿ ಜೀವದಾಯಕವಾಗಿರುವಂತೆ ಜೀವಮಾರಕವೂ ಹೌದು ಎನ್ನುವುದು ಇಲ್ಲಿ ಲಂಕೇಶರ ನಂಬಿಕೆಯಾಗಿದೆ.

- 'ಚಳಿಗಾಲದ ಅನಿಸಿಕೆಗಳು' – ಈ ಲೇಖನದಲ್ಲಿ ನಮ್ಮ ಸಮಾಜವರ್ಗ, ವರ್ಣಗಳಿಂದ ಕೂಡಿದ ಬಹುಮುಖಿ ಜೀವನ ವಿಧಾನವಾಗಿದೆ. ಇಲ್ಲಿ ಬಡವರು– ಶ್ರೀಮಂತರು ಎನ್ನುವ ಅಂತರ ಅಪಾರವಾಗಿದೆ. ನಮ್ಮ ಬಹುಮುಖಿ ಸಮಾಜ ವ್ಯವಸ್ಥೆಯ ಅಪಾಯಗಳಲ್ಲಿ ಇದೂ ಸಹ ಒಂದಾಗಿದೆ. ಬೆಂಗಳೂರು ಎನ್ನುವ ಮಾಯಾನಗರಿಯಲ್ಲಿ ಅಪಾರ ಸಂಖ್ಯೆಯ ನಿರ್ಗತಿಕರು ಹೊಟ್ಟೆಗೆ ಅನ್ನವಿಲ್ಲದೆ, ಹೊದೆಯಲು ಬಟ್ಟೆಯಿಲ್ಲದೆ

ಅಂಗಡಿ ಮುಂಗಟ್ಟುಗಳ ಎದುರು ಸಾಲು ಸಾಲಾಗಿ ಚಳಿಯಲ್ಲಿ ನಡಗುತ್ತಲೇ ಜೀವನ ಸಾಗಿಸುತ್ತಿದ್ದಾರೆ. ಇಲ್ಲಿಯ ಬಹುಪಾಲು ಶ್ರೀಮಂತರ ಮನೆಯಲ್ಲಿ ಸುಮಾರು ಸಾವಿರ ನಾಯಿಗಳು ಸುಖವಾಗಿ ನಿದ್ರಿಸುತ್ತಿವೆ. ಇಲ್ಲಿ ಮಲಗಿರುವ ಒಬ್ಬೊಬ್ಬ ನಿರ್ಗತಿಕರನ್ನು ಶ್ರೀಮಂತರು ದತ್ತು ತೆಗೆದುಕೊಂಡರೂ ನಮ್ಮ ದೇಶದ ಒಂದು ಮುಖ್ಯ ಸಮಸ್ಯೆ ಬಗೆಹರಿಯುತ್ತದೆ ಎನ್ನುತ್ತಾರೆ. ಅವರು ಹೇಳುವಂತೆ "ನನ್ನ ಈ ದೇಶದಲ್ಲಿ ಮಾತ್ರ ಮನುಷ್ಯರು ನಾಯಿಗಿಂತ ಎಲ್ಲದರಲ್ಲೂ ಕಡಿಮೆ ಬೆಲೆಯುಳ್ಳವರಾಗಿದ್ದಾರೆ"[೨೦] ಇಂಥ ಕಡೆಗಳಲ್ಲಿ ಸಂಸ್ಕೃತಿಯ ಬಗ್ಗೆ ಹೇಳುವಾಗ ವರ್ಗ ಅಸಮಾನತೆಯನ್ನು ಗುರುತಿಸುತ್ತಾರೆ.

- 'ಧರ್ಮದ ಗಂಧವಿಲ್ಲದವರು' – ಎಂಬ ಲೇಖನದಲ್ಲಿ ನಮ್ಮದು ಪ್ರಜಾಪ್ರಭುತ್ವ, ಜಾತ್ಯಾತೀತ ರಾಷ್ಟ್ರ, ಭಾರತೀಯತೆ ಎಂಬ ಹೊಣೆಯರಿತ ನಮ್ಮಲ್ಲಿ ಆತಂಕ, ಭಯ, ಆದರ್ಶ ನೆನಪುಗಳು ತುಂಬಿರುವುದು ಕುತೂಹಲಕಾರಿಯಾದುದು", ಎನ್ನುತ್ತಾ ಲಂಕೇಶರು ಬ್ರಿಟಿಷರಿಂದ ಗುಲಾಮರಾಗಿ ತೊಂದರೆಯನ್ನ ಅನುಭವಿಸಿ ಯಾರೂ ಅವರ ವಿರುದ್ಧ ಹೋರಾಡುವ ಶಕ್ತಿ ಹೊಂದಿರಲಿಲ್ಲ. ಆದರೆ ಗಾಂಧೀಗೆ ಇದು ಚರಿತ್ರೆಯಾಗಿರಲಿಲ್ಲ. ಕರುಣಾಜನಕ ಸ್ಥಿತಿಯಾಗಿತ್ತು ಮತ್ತು ಈ ದೇಶದ ಒಂದು ರೋಗದಂತಿತ್ತು"[೨೧] ಎನ್ನುವ ಗಾಂಧಿ ಭಾವನೆಯನ್ನು ಒಪ್ಪುತ್ತಾರೆ. ಸ್ವಾತಂತ್ರ್ಯಾ ನಂತರ ಎಲ್ಲ ಧರ್ಮೀಯರೂ ಸ್ವಾರ್ಥ, ಸ್ವಪ್ರತಿಷ್ಠೆ, ವರ್ಣ–ವರ್ಗ ಎಂಬ ವ್ಯವಸ್ಥೆಯನ್ನು ಹೊಂದಿ ಮೂಡರಾಗಿದ್ದಾರೆ. ಅನೇಕತೆಯಲ್ಲಿ ಏಕತೆಯಲ್ಲಿ ಹೊಂದದಿದ್ದರೆ ಅನೇಕ ಆಪಾಯಗಳಿಗೆ ದಾರಿ ಮಾಡಿಕೊಡುತ್ತೇವೆ. ಸರ್ವೋದಯ ಎಂಬ ಕಲ್ಪನೆಯ ಸತ್ಯವನ್ನು ಎಲ್ಲರೂ ಒಪ್ಪಿಕೊಂಡು ಒಂದಾಗಿ ಮುನ್ನಡೆಯೋಣ ಎನ್ನುವಲ್ಲಿ ಲಂಕೇಶರು ಸಂಸ್ಕೃತಿಯ ಬಹುಮುಖತೆಯ ಬಗ್ಗೆ ಗೌರವ ಹೊಂದಿದ್ದಾರೆ ಎನ್ನಬಹುದು.

**ಲಂಕೇಶರ ದೃಷ್ಟಿಯಲ್ಲಿ ಸಂಸ್ಕೃತಿ ಚಿಂತನೆಯ ಮುಖ್ಯಾಂಶಗಳು :**

೧. ಆರ್ಥಿಕತೆಯ ನೆಲೆಯಲ್ಲಿ ಯೋಚಿಸುವವರಿಗೆ ಸಂಸ್ಕೃತಿಯ ಭಾವನಾಮಯ ವಾತಾವರಣ ಅರ್ಥವಾಗಲಾರದು.

೨. ಸಂಪತ್ತಿನ ಸಂಗ್ರಹಣೆಯೂ ಮನುಷ್ಯ ಜೀವನದ ಉದ್ದೇಶವಲ್ಲ, ಸಂಸ್ಕೃತಿಯೂ ಮುಖ್ಯ.

೩. ದೀರ್ಘ ಮತ್ತು ಪ್ರಾಚೀನ ನಾಡಿನ ಸಂಸ್ಕೃತಿಯ ಆತ್ಮ ನಾಶ ಸಾಧ್ಯವಿಲ್ಲ.

೪. ಸಂಸ್ಕೃತಿ ಎಂಬುದು ವಿಚಿತ್ರ, ವಿಪರ್ಯಾಸಮಯ ಅನುಭವಗಳಿಂದ ರೂಪುಗೊಳ್ಳುವುದೇ ಹೊರತು ಕೃತಕವಾದ ವರ್ತನೆಯಿಂದಲ್ಲ.

೫. ಸಂಸ್ಕೃತಿಯ ಒಡಲೊಳಗೆ ಪ್ರತಿರೋಧ ಸಾಧ್ಯವಿದೆ.

೬. ನಿಜವಾದ ಸಾಂಸ್ಕೃತಿಕ ಕ್ರಾಂತಿ ಸಾಧ್ಯವಾಗುವುದು ವಿಕೇಂದ್ರಿಕರಣದಿಂದ.

೭. ಒಬ್ಬ ಮನುಷ್ಯನ ಘನತೆ, ಆತ್ಮಗೌರವಗಳು ರಾಜಕೀಯ ಮತ್ತು ಸಾಂಸ್ಕೃತಿಕ ಪಾಲುದಾರಿಕೆಯೊಂದಿಗೆ ಬೆಸೆದುಕೊಂಡಿವೆ.

೮. ಸಂಸ್ಕೃತಿಯು ಜೀವದಾಯಕವಾದುದು ಎಂಬ ನಂಬಿಕೆ.

೯. ಸಂಸ್ಕೃತಿಯನ್ನು ವಿಮರ್ಶೆ ಮಾಡುವುದು ತಪ್ಪಲ್ಲವಾದರೂ ಕುರುಡು ವಿರೋಧ ಸರಿಯಾದುದಲ್ಲ.

೧೦. ಕಲೆ, ಸಾಹಿತ್ಯ, ಆಡಳಿತ, ಅಧಿಕಾರ ಇತ್ಯಾದಿಗಳು ಪ್ರತ್ಯೇಕವಲ್ಲ ಇವೆಲ್ಲವೂ ಒಗ್ಗೂಡಿದಾಗಲೇ ಅದು ಸಂಸ್ಕೃತಿಯಾಗುತ್ತದೆ. ಇಲ್ಲಿ ಲಂಕೇಶರು ಸಂಸ್ಕೃತಿ ಅಧಿಕಾರದಿಂದ ದೂರವಿರುತ್ತದೆ ಎನ್ನುವ ಅಭಿಪ್ರಾಯವನ್ನು ತಿರಸ್ಕರಿಸುತ್ತಾರೆ.

೧೧. ಮಧ್ಯಮ ವರ್ಗಗಳೇ ಸಂಸ್ಕೃತಿಯ ಸಂಚಾಲಕ ಶಕ್ತಿಗಳು.

೧೨. ಜಾತಿ–ಧರ್ಮ ಇತ್ಯಾದಿಗಳನ್ನು ಒಳಗೊಂಡ ಸಂಸ್ಕೃತಿ ಜೀವದಾಯಕವಾಗಿರುವಂತೆ ಜೀವಮಾರಕವೂ ಹೌದು ಎನ್ನುವ ನಂಬಿಕೆ.

೧೩. ಸಂಸ್ಕೃತಿಯ ಬಗ್ಗೆ ಹೇಳುವಾಗ ವರ್ಗ ಅಸಮಾನತೆಯನ್ನು ಗುರುತಿಸುತ್ತಾರೆ.

೧೪. ಸಂಸ್ಕೃತಿಯ ಬಹುಮುಖತೆಯ ಬಗ್ಗೆ ಗೌರವ ಹೊಂದಿದ್ದಾರೆ.

## ಅಧ್ಯಾಯ–೨ ಟಿಪ್ಪಣಿಗಳು

೧. ರಹಮತ್ ತರೀಕೆರೆ, ಸಾಂಸ್ಕೃತಿಕ ಅಧ್ಯಯನ, ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು, ೨೦೦೪, ಪು.೩.

೨. ಡಿ.ವಿ.ಜಿ., ಸಂಸ್ಕೃತಿ, ಕಾವ್ಯಾಲಯ ಪ್ರಕಾಶನ, ಮೈಸೂರು, ೧೯೯೬, ಪು.೧೧.

೩. ರಹಮತ್ ತರೀಕೆರೆ, ಸಾಂಸ್ಕೃತಿಕ ಅಧ್ಯಯನ, ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು.

೪. ರಹಮತ್ ತರೀಕೆರೆ, ಸಾಂಸ್ಕೃತಿಕ ಅಧ್ಯಯನ, ಕರ್ನಾಟಕ ಸಾಹಿತ್ಯ ಅಕಾಡೆಮಿ, ೨೦೦೪, ಪು.೬.

೫. ರಹಮತ್ ತರೀಕೆರೆ, ಸಾಂಸ್ಕೃತಿಕ ಅಧ್ಯಯನ, ಕರ್ನಾಟಕ ಸಾಹಿತ್ಯ ಅಕಾಡೆಮಿ, ೨೦೦೪, ಪು.೧೫.

೬. ರಹಮತ್ ತರೀಕೆರೆ, ಸಾಂಸ್ಕೃತಿಕ ಅಧ್ಯಯನ, ಕರ್ನಾಟಕ ಸಾಹಿತ್ಯ ಅಕಾಡೆಮಿ, ೨೦೦೪, ಪು.೧೫.

೭. ರಹಮತ್ ತರೀಕೆರೆ, ಸಾಂಸ್ಕೃತಿಕ ಅಧ್ಯಯನ, ಕರ್ನಾಟಕ ಸಾಹಿತ್ಯ ಅಕಾಡೆಮಿ, ೨೦೦೪, ಪು.೧೫.

೮. ರಹಮತ್ ತರೀಕೆರೆ, ಸಾಂಸ್ಕೃತಿಕ ಅಧ್ಯಯನ, ಕರ್ನಾಟಕ ಸಾಹಿತ್ಯ ಅಕಾಡೆಮಿ, ೨೦೦೪, ಪು.೧೫.

೯. ರಹಮತ್ ತರೀಕೆರೆ, ಸಾಂಸ್ಕೃತಿಕ ಅಧ್ಯಯನ, ಕರ್ನಾಟಕ ಸಾಹಿತ್ಯ ಅಕಾಡೆಮಿ, ೨೦೦೪, ಪು.೧೫.

೧೦. ಲಂಕೇಶ್ ಪಿ. ಟೀಕೆ–ಟಿಪ್ಪಣಿ ಸಂಪುಟ–೨, ಪತ್ರಿಕೆ ಪ್ರಕಾಶನ, ಬೆಂಗಳೂರು, ೧೯೯೮, ಪು.೧೨೧.

೧೧. ಲಂಕೇಶ್ ಪಿ. ಟೀಕೆ–ಟಿಪ್ಪಣಿ ಸಂಪುಟ–೨, ಪತ್ರಿಕೆ ಪ್ರಕಾಶನ, ಬೆಂಗಳೂರು, ೧೯೯೮, ಪು.೪೨೫.

೧೨. ಲಂಕೇಶ್ ಪಿ. ಟೀಕೆ–ಟಿಪ್ಪಣಿ ಸಂಪುಟ–೨, ಪತ್ರಿಕೆ ಪ್ರಕಾಶನ, ಬೆಂಗಳೂರು, ೧೯೯೮, ಪು.೨೩೩.

೧೩. ಲಂಕೇಶ್ ಪಿ. ಟೀಕೆ–ಟಿಪ್ಪಣಿ, ಸಂಪುಟ–೧, ಪತ್ರಿಕೆ ಪ್ರಕಾಶನ, ಬೆಂಗಳೂರು, ೧೯೯೭, ಪು.೪೩೪.

೧೪. ಲಂಕೇಶ್ ಪಿ. ಟೀಕೆ–ಟಿಪ್ಪಣಿ, ಸಂಪುಟ–೧, ಪತ್ರಿಕೆ ಪ್ರಕಾಶನ, ಬೆಂಗಳೂರು, ೧೯೯೭, ಪು.೪೩೮.

೧೫. ಲಂಕೇಶ್ ಪಿ. ಟೀಕೆ–ಟಿಪ್ಪಣಿ, ಸಂಪುಟ–೧, ಪತ್ರಿಕೆ ಪ್ರಕಾಶನ, ಬೆಂಗಳೂರು, ೧೯೯೭, ಪು.೪೩೯.

೧೬. ೧೪. ಲಂಕೇಶ್ ಪಿ. ಟೀಕೆ–ಟಿಪ್ಪಣಿ, ಸಂಪುಟ–೧, ಪತ್ರಿಕೆ ಪ್ರಕಾಶನ, ಬೆಂಗಳೂರು, ೧೯೯೭, ಪು.೩೬೨.

೧೭. ಲಂಕೇಶ್ ಪಿ. ಟೀಕೆ–ಟಿಪ್ಪಣಿ, ಸಂಪುಟ–೧, ಪತ್ರಿಕೆ ಪ್ರಕಾಶನ, ಬೆಂಗಳೂರು, ೧೯೯೭, ಪು.೧೫೭.

೧೮. ಲಂಕೇಶ್ ಪಿ. ಟೀಕೆ–ಟಿಪ್ಪಣಿ, ಸಂಪುಟ–೧, ಪತ್ರಿಕೆ ಪ್ರಕಾಶನ, ಬೆಂಗಳೂರು, ೧೯೯೭, ಪು.೧೨೩

೧೯. ಲಂಕೇಶ್ ಪಿ. ಟೀಕೆ–ಟಿಪ್ಪಣಿ, ಸಂಪುಟ–೧, ಪತ್ರಿಕೆ ಪ್ರಕಾಶನ, ಬೆಂಗಳೂರು, ೧೯೯೭, ಪು.೪೧.

೨೦. ಲಂಕೇಶ್ ಪಿ. ಟೀಕೆ–ಟಿಪ್ಪಣಿ, ಸಂಪುಟ–೧, ಪತ್ರಿಕೆ ಪ್ರಕಾಶನ, ಬೆಂಗಳೂರು, ೧೯೯೭, ಪು.೪೯

೨೧. ಲಂಕೇಶ್ ಪಿ. ಟೀಕೆ–ಟಿಪ್ಪಣಿ, ಸಂಪುಟ–೧, ಪತ್ರಿಕೆ ಪ್ರಕಾಶನ, ಬೆಂಗಳೂರು, ೧೯೯೭, ಪು.೧೩೪.

ಅಧ್ಯಾಯ : ಮೂರು

# ಬರ್ತೂರು ಪಂಚಾಯಿತಿ ಭಾಗದಲ್ಲಿರುವ ವ್ಯಂಗ್ಯ ಮತ್ತು ವಿಷಾಧ ಇವುಗಳ ಹಿಂದಿರುವ ಮಾನವೀಯ ಮನಸ್ಸು.

೧. ಪಂಚಾಯಿತಿ ಮಟ್ಟಕ್ಕೆ ಇಳಿದ ರಾಜಕೀಯ ವ್ಯವಸ್ಥೆ.

೨. ಮಾತುಗಾರಿಕೆಯಲ್ಲಿ ಭ್ರಮೆ ಹುಟ್ಟಿಸುವುದು.

೩. ಜಾತಿ-ಪದ್ಧತಿಯಿಂದ ಪ್ರತಿಭೆಗೆ ಮಾನ್ಯತೆ ದೊರೆಯದಿರುವುದು.

೪. ಪ್ರಮಾಣಿಕತೆಯ ಆಶಯ.

೫. ಸಂಪನ್ನರ ಗುಂಪಿನ ಮಹತ್ವ.

೬. ನೀನು ನನ್ನೊಳಗೋ

೭. ರಾಜಕಾರಣಿಗಳ ಸೊಗಲಾಡಿತನದ ಬಗ್ಗೆ ಆಕ್ರೋಶ.

೮. ರಾಜಕಾರಣ ಮತ್ತು ಬಂಡವಾಳಶಾಹಿ ಸಂಬಂಧ.

೯. ರಾಜಕೀಯ ಮತ್ತು ಧರ್ಮ.

ಅಧ್ಯಾಯ-೩

# ಬತ್ತೂರು ಪಂಚಾಯಿತಿ ಭಾಗದಲ್ಲಿರುವ ವ್ಯಂಗ್ಯ ಮತ್ತು ವಿಷಾದ ಇವುಗಳ ಹಿಂದಿರುವ ಮಾನವೀಯ ಮನಸ್ಸು

ತುರ್ತು ಪರಿಸ್ಥಿತಿಯ ನಂತರ ಭಾರತೀಯ ಬೌದ್ಧಿಕ ಮನಸ್ಸು ಆ ವಿಚಿತ್ರಕ್ಕೆ ಪ್ರತಿಕ್ರಿಯಿಸಿದ ರೀತಿ ತುಂಬಾ ವಿಶಿಷ್ಟವಾದುದು. ಅಭಿವ್ಯಕ್ತಿ ಸ್ವಾತಂತ್ರ್ಯ ಬಹುಮುಖ್ಯವಾದ ನೆಲೆಯಲ್ಲಿ ಚರ್ಚೆಗೆ ಬಂದದ್ದು ಈ ಕಾಲಘಟ್ಟದಲ್ಲಿಯೇ. ಸ್ವಾತಂತ್ರ್ಯಾ ನಂತರ ಭಾರತೀಯರ ಮನಸ್ಸು ಒಂದು ರೀತಿಯ ವ್ಯಾಕುಲಕ್ಕೆ ಒಳಗಾದುದನ್ನು ಕಾಣಬಹುದು. ಅದರಲ್ಲಿಯೂ ೧೯೭೦ರ ಸನ್ನಿವೇಶದಲ್ಲಿ ಕನ್ನಡದ ಸಾಹಿತ್ಯ ವಲಯ ಪ್ರಗತಿಹೀನ ಹಾಗೂ ತನ್ನದೇ ಆದ ಸ್ವಾವಲಂಬನೆಯಿಲ್ಲದ ರಾಜಕೀಯ ವ್ಯವಸ್ಥೆಯನ್ನು ಛೇಡಿಸತೊಡಗಿತು. ಸಾಹಿತ್ಯದಲ್ಲಿ ವ್ಯಂಗ್ಯ ವಿಡಂಬನೆಗಳು ಅಧಿಕವಾದವು. ಒಂದು ರೀತಿಯ ನೈರಾಶ್ಯದ ವಾತಾವರಣ ಸಾಹಿತ್ಯದ ವಲಯದಲ್ಲಿತ್ತು. ಅಡಿಗರು "ಇಲ್ಲ ಇಲ್ಲ ಏನೊಂದೂ ಮಾಡಲಿಲ್ಲ ಇವನು"[೧] ಎಂದಾಗ ಆಗಲಿ ಅಥವಾ "ಬೇರು ಸತ್ತೀ ಮರವನೆತ್ತಿ ನಿಲ್ಲಿಸು ಮಗು"[೨] ಎನ್ನಲಿ ಅಲ್ಲಿ ಈ ನೈರಾಶ್ಯವೇ ಪ್ರಧಾನ. ಚಂಪಾ ಕಾವ್ಯ ಇದನ್ನು ಇನ್ನೊಂದು ರೀತಿಯಲ್ಲಿ ವಿಡಂಬನೆಗೆ ಒಳಪಡಿಸುತ್ತದೆ. ಅವರ ಕಾವ್ಯದಲ್ಲಿ ಬರುವ "ಹೆದ್ದಾರಿಯ ಮೇಲೆ ಕೆಟ್ಟು ನಿಂತ ಟ್ರಕ್ಕು ಕೂಡ ನಾಡು ಮುನ್ನಡೆದಿದೆ"[೩] ಎಂಬ ಸಂದೇಶ ಹೊತ್ತಿದೆ. "ಜಾಣ ಬಾಬಾಗಳಿಗೆ ಹುಚ್ಚುಗೌಡರ ಬೆನ್ನು ಸಿಕ್ಕಿ ಧರ್ಮೋದ್ಧಾರದ ಸವರಿ ಮುನ್ನಡೆದಿದೆ"[೪] ಎನ್ನುವ ಸಾಲುಗಳನ್ನು ನಾವು ವ್ಯಂಗ್ಯ ಮತ್ತು ನೈರಾಶ್ಯದ ಭಾವನೆಯ ಹಿನ್ನೆಲೆಯಲ್ಲಿಯೇ ಅರ್ಥಮಾಡಿಕೊಳ್ಳಬೇಕು. ಒಟ್ಟಾರೆ ಸ್ವತಂತ್ರ ನಂತರದ ಕನ್ನಡ ಸಾಹಿತ್ಯ ಈ ನೈರಾಶ್ಯದ ಭಾವನೆಯನ್ನು ಕೇಂದ್ರವಾಗಿಟ್ಟುಕೊಂಡಿದೆ. ತುರ್ತುಪರಿಸ್ಥಿತಿಯ ನಂತರ ಈ ನೈರಾಶ್ಯದ ಭಾವನೆಗೆ ಪರ್ಯಾಯ ರಾಜಕಾರಣದ ಸಂಕಲ್ಪವೂ ಸೇರಿ ಅನೇಕ ರೀತಿಯ ಚಿಂತನೆ ಮೂಡಿದ್ದನ್ನು ಕಾಣಬಹುದು. ಈ ರೀತಿಯ ವಿಷಾದ ಜೊತೆಯಲ್ಲಿಯೇ ಪರ್ಯಾಯವನ್ನು ಯೋಚಿಸುವ ಮನಸ್ಸು ಲಂಕೇಶರ ಟೀಕೆ-ಟಿಪ್ಪಣಿಗಳನ್ನು ಮೂಡಿರುವುದನ್ನು ಕಾಣಬಹುದಾಗಿದೆ. ಪ್ರಸ್ತುತ ರಾಜಕಾರಣವನ್ನು ಕೇವಲ ವ್ಯಂಗ್ಯದಿಂದ ನೋಡಿ ವಿಷಾದ ಸೂಚಿಸಿ ಲಂಕೇಶರು ಸುಮ್ಮನಾಗುವುದಿಲ್ಲ. ಪರಂಪರೆಯಲ್ಲಿಯೇ ಅದಕ್ಕೊಂದು ಪರ್ಯಾಯವನ್ನು ಅವರು ಚಿಂತಿಸುತ್ತಾರೆ. ಹಾಗಾಗಿಯೇ ಇಲ್ಲಿನ ಚಿಂತನೆಗಳು ಮುರಿದು ಕಟ್ಟುವ ಆಯಾಮವನ್ನು ಹೊಂದಿವೆ.

ಈ ಹಿನ್ನೆಲೆಯಲ್ಲಿ ಪ್ರಸ್ತುತ ಅಧ್ಯಯನವನ್ನು ಮುಂದಿನಂತೆ ಉಪ ಆಶಯಗಳಾಗಿ ವರ್ಗೀಕರಿಸಿಕೊಂಡು ಅಧ್ಯಯನ ಮಾಡಿದ್ದೇನೆ.

೧. ಪಂಚಾಯಿತಿ ಮಟ್ಟಕ್ಕೆ ಇಳಿದ ರಾಜಕೀಯ ವ್ಯವಸ್ಥೆ.

೨. ಮಾತುಗಾರಿಕೆಯಲ್ಲಿ ಭ್ರಮೆ ಹುಟ್ಟಿಸುವುದು.

೩. ಜಾತಿ–ಪದ್ಧತಿಯಿಂದ ಪ್ರತಿಭೆಗೆ ಮಾನ್ಯತೆ ದೊರೆಯದಿರುವುದು.

೪. ಪ್ರಮಾಣಿಕತೆಯ ಆಶಯ.

೫. ಸಂಪನ್ನರ ಗುಂಪಿನ ಮಹತ್ವ.

೬. ನೀನು ನನ್ನೊಳಗೋ

೭. ರಾಜಕಾರಣಿಗಳ ಸೊಗಲಾಡಿತನದ ಬಗ್ಗೆ ಆಕ್ರೋಶ.

೮. ರಾಜಕಾರಣ ಮತ್ತು ಬಂಡವಾಳಶಾಹಿ ಸಂಬಂಧ.

೯. ರಾಜಕೀಯ ಮತ್ತು ಧರ್ಮ.

ಈ ರೀತಿಯ ವಿಭಾಗೀಕರಣ ಮಾಡಿಕೊಂಡು ಇವುಗಳಲ್ಲಿ ವ್ಯಕ್ತವಾಗಿರುವ ವ್ಯಂಗ್ಯ ಮತ್ತು ವಿಷಾದವನ್ನು ಗುರುತಿಸುತ್ತಲೇ ಅದರ ಹಿಂದಿರುವ ಮಾನವೀಯ ಮನಸ್ಸನ್ನು ಗುರುತಿಸುವ ಪ್ರಯತ್ನ ಮಾಡಿದ್ದೇನೆ. ರೋಗಗ್ರಸ್ತ ಸಮಾಜವನ್ನು ಗುರುತಿಸುವುದು ಎಷ್ಟು ಮುಖ್ಯವೋ, ಅದಕ್ಕೆ ಚಿಕಿತ್ಸಕ ಮನೋಭಾವದಿಂದ ಪ್ರತಿಕ್ರಿಯಿಸುವುದು ಅಷ್ಟೇ ಮುಖ್ಯ. ಸಂಸ್ಕೃತಿ ರೂಪಿಕೆಯ ಪ್ರಕ್ರಿಯೆಯಲ್ಲಿ ಈ ಗುರುತಿಸುವ ಚಿಕಿತ್ಸೆಗೊಳಪಡಿಸುವ ಕ್ರಿಯೆಗಳೇ ಮುಖ್ಯವಾದವು. ಲಂಕೇಶರ ಟೀಕೆ–ಟಿಪ್ಪಣಿಗಳ ಹಿಂದಿರುವುದು ಈ ಮನೋಭಾವವೇ ಆಗಿದೆ.

**೧. ಪಂಚಾಯಿತಿ ಮಟ್ಟಕ್ಕೆ ಇಳಿದ ರಾಜಕೀಯ ವ್ಯವಸ್ಥೆ :**

ಸ್ವಾತಂತ್ರ್ಯಾ ನಂತರ ಭಾರತವು ತನ್ನನ್ನು ಜಾತ್ಯಾತೀತ ಪ್ರಜಾಪ್ರಭುತ್ವವಾದಿ ಒಕ್ಕೂಟವೆಂದು ಘೋಷಿಸಿಕೊಂಡಿತು. ತ್ಯಾಗ, ಬಲಿದಾನಗಳಿಂದ ಬಂದ ಸ್ವಾತಂತ್ರ್ಯದಿಂದ ನಮ್ಮಲ್ಲಿ ಸಮಸ್ಯೆಗಳು ನಿವಾರಣೆಯಾಗುತ್ತವೆಂಬ ಆಶಯ, ಉತ್ಸಾಹ ಅಂದಿನ ಜನರಲ್ಲಿತ್ತು. "ಕಟ್ಟುವೆವು ನಾವು ಹೊಸ ನಾಡೊಂದನು ರಸದ ಬೀಡೊಂದನು"[೫] ಎಂಬ ಆತ್ಮವಿಶ್ವಾಸವಿತ್ತು. ಆದರೆ ಈ ಭಾವನೆ ಕೆಲ ದಿನಗಳಲ್ಲಿಯೇ ಮಾಯವಾಗಿ ಹಿಂದೆ ಹೇಳಿದಂತೆ ನೈರಾಶ್ಯಕ್ಕೆ ಕಾರಣವಾಯಿತು. ಲಂಕೇಶರ ಬರಹಗಳಲ್ಲಿ ಇದು ತೀವ್ರ ರೀತಿಯಲ್ಲಿ ಅಭಿವ್ಯಕ್ತವಾಗಿದೆ. ಅವರು 'ಬರ್ತೂರಿನ ಗ್ರಾಮ ಪಂಚಾಯಿತಿ ಪರಿಚಯ'[೬] ಮಾಲಿಕೆಯ ಲೇಖನದಲ್ಲಿ ವ್ಯಕ್ತಪಡಿಸುವುದು ಇಂತಹ ನೈರಾಶ್ಯವನ್ನೇ.

ಭಾರತದ ಪ್ರಜಾಪ್ರಭುತ್ವ, ಸಂಸದೀಯ ಸರ್ಕಾರ ವ್ಯವಸ್ಥೆಯನ್ನ ಹೊಂದಿದ್ದರೂ ತನ್ನಲ್ಲಿ ಅನೇಕ ಲೋಪ ದೋಷಗಳನ್ನು ಒಳಗೊಂಡಿದೆ. ಜಾತ್ಯಾತೀತವೆಂದು ಘೋಷಿಸಿಕೊಂಡಿದ್ದರೂ

ಇಲ್ಲಿ ಅನೇಕ ಜಾತಿ–ಉಪಜಾತಿಗಳು ರಾಜಕೀಯ ಅಧಿಕಾರಕ್ಕಾಗಿ ಮುನ್ನಲೆಯಲ್ಲಿವೆ. ಜಾತಿಪದ್ಧತಿಯ ಜೊತೆಗೆ, ಜೀತಪದ್ಧತಿಯೂ ಮುಂದುವರಿಯುತ್ತಿದೆ. ಸಮಾಜವಾದಿ ಆಶಯವನ್ನು ನಮ್ಮ ಸಂವಿಧಾನ ಹೊಂದಿದ್ದರೂ ಬಡವ–ಶ್ರೀಮಂತ ಎಂಬ ವರ್ಗ ವ್ಯತ್ಯಾಸಗಳು ಶಾಶ್ವತವೇನೋ ಎಂಬಂತೆ ಗೋಚರಿಸುತ್ತಿವೆ. ರಾಜಕೀಯ ಅಧಿಕಾರವನ್ನು ಹಿಡಿಯುವವರು ಅನೂಚಾನವಾಗಿ ಮೇಲ್ವರ್ಗದವರೇ ಆಗಿದ್ದಾರೆ. ಈ ರೀತಿಯು ವಿಚಿತ್ರವಾದ ಸ್ಥಿತಿ ಭಾರತೀಯ ರಾಜಕಾರಣದಲ್ಲಿದೆ. ಇಲ್ಲಿ ಜಾತಿ, ಹಣ, ವರ್ಗಗಳೇ ಮುಖ್ಯವಾಗಿ ಬೇರೆಲ್ಲಾ ಶಕ್ತಿಗಳು ಕಡೆಗಣಿಸಲ್ಪಟ್ಟಿವೆ. ಸಂಸದೀಯ ವ್ಯವಸ್ಥೆಯ ಈ ಸ್ಥಿತಿಯನ್ನ ಲಂಕೇಶರು ಪಂಚಾಯಿತಿಯ ಪ್ರತಿಮೆಯ ಮುಖಾಂತರ ವಿವರಿಸುವ ಪ್ರಯತ್ನ ಮಾಡಿದ್ದಾರೆ. ವಿಕೇಂದ್ರೀಕರಣ ವ್ಯವಸ್ಥೆಯಲ್ಲಿ ಪಂಚಾಯಿತಿಗೆ ಎಷ್ಟೇ ಮಹತ್ವವಿದ್ದರೂ ಅಲ್ಲಿಯ ರಾಜಕೀಯ ಅಧಿಕಾರವನ್ನು, ರಾಜಕೀಯ ಸಂಸ್ಕೃತಿಯನ್ನು ರೂಪಿಸುವವರು ಮೇಲ್ವರ್ಗ ಮತ್ತು ಮೇಲು ಜಾತಿಯವರೇ ಆಗಿರುತ್ತಾರೆ. ಇಲ್ಲಿ ಕಾರ್ಯನಿರ್ವಹಿಸುವುದು ಜಾತಿ, ಹಣ ಎನ್ನುವ ಕಾಣದ ಕೈಗಳೇ ವಿನಃ ಸ್ಪಷ್ಟವಾದ ಬೌದ್ಧಿಕತೆಯಲ್ಲ. ಈ ಪಂಚಾಯಿತಿ ಮಟ್ಟದ ರಾಜಕೀಯ ಸಂಸ್ಕೃತಿ ಭಾರತೀಯ ಸಂಸತ್ತಿನವರೆವಿಗೂ ಪ್ರಸರಿಸಿರುವುದು ಇಲ್ಲಿ ವ್ಯಂಗ್ಯ ಮತ್ತು ವಿಷಾದಕ್ಕೆ ಕಾರಣವಾಗುತ್ತದೆ. ನಮ್ಮ ನಾಯಕರಲ್ಲಿ ದೇಶವನ್ನು ಕಟ್ಟುವ ಹೊಸ ಆಶಯಗಳನ್ನು ಎತ್ತಿ ಹಿಡಿಯುವ ಮನೋಭಾವವೇ ಮಾಯವಾಗಿದೆ ಎಂಬುದನ್ನು ಲಂಕೇಶರು "ನಮ್ಮಲ್ಲಿ ಸಂಸದೀಯ ವ್ಯವಸ್ಥೆಯಿದೆ ಹೊಸ–ಹೊಸ ಆದರ್ಶ ಕನಸುಗಳನ್ನು ಹೊಂದಿರುವ ನಾಯಕರು ಅಧಿಕಾರ ಸ್ವೀಕರಿಸುವಾಗ ತಮ್ಮ ಎಲ್ಲಾ ಆದರ್ಶಗಳನ್ನು ಮರೆಯುತ್ತಿದ್ದಾರೆ. ಹಳೆಯ ವ್ಯವಸ್ಥೆಯನ್ನು ಮುಂದುವರಿಸುತ್ತಿದ್ದಾರೆ. ಇಲ್ಲಿನ ಅನೇಕ ರಾಜಕೀಯ ನಾಯಕರು ರೈತ ಕುಟುಂಬದಿಂದ ಬಂದವರಾಗಿದ್ದರೂ, ರೈತರ ಸಮಸ್ಯೆಗಳು ಅರಿವಿದ್ದವರೂ ಅಧಿಕಾರ ದೊರೆತ ಮೇಲೆ ಎಲ್ಲವನ್ನು ಮರೆಯುವ ಗೋಸುಂಬೆಯ ಜಾತಿಯಂತವರಾಗುತ್ತಿದ್ದಾರೆ. ಎಲ್ಲರೂ ವಾಸ್ತವತೆಯನ್ನು ಮರೆತು ಕಲ್ಪನಾಲೋಕದಲ್ಲಿ ವಿಹರಿಸುತ್ತಿದ್ದಾರೆ" ಎನ್ನುವ ಮಾತುಗಳನ್ನು ಹೇಳುತ್ತಾರೆ. ಪ್ರಜಾಪ್ರಭುತ್ವದಲ್ಲಿ ಮುಖ್ಯವಾಗುವ ರಾಜಕೀಯ ಪ್ರಬುದ್ಧತೆ ಮಾಯವಾಗಿರುವುದು ಅವರ ಆತಂಕಕ್ಕೆ ಕಾರಣವಾಗಿದೆ. ಆ ಆತಂಕವನ್ನು ನಾವು ಬತ್ತೂರು ಗ್ರಾಮಪಂಚಾಯಿತಿಯ ವ್ಯಾಪ್ತಿಯ ಲೇಖನಗಳಲ್ಲಿ ಗುರುತಿಸಬಹುದು.

**೨. ಮಾತುಗಾರಿಕೆಯಲ್ಲಿ ಭ್ರಮೆ ಹುಟ್ಟಿಸುವವರು :**

"ಮಾತು ಮಾತು ಮಾತು ಮಾತಿನ ಗೈರತ್ತಿನಲ್ಲಿ ಕರಾಮತ್ತು ನಡೆಸುವವರು"[೬] ಎಂದು ನಿಸಾರರು ತಮ್ಮ ಪ್ರಸಿದ್ಧ ಕವನದಲ್ಲಿ ಭಾರತೀಯ ರಾಜಕೀಯ ವ್ಯವಸ್ಥೆಯನ್ನು ವಿಡಂಬಿಸಿದ್ದಾರೆ. ಲಂಕೇಶರು ಸಹ ನಮ್ಮ ರಾಜಕೀಯ ವ್ಯಕ್ತಿಗಳು ಮಾತಿನ ಮಹತ್ವ ಗೊತ್ತಿಲ್ಲದೆ ಜನಸಾಮಾನ್ಯರಿಗೆ ಚುನಾವಣೆಯ ಸಂದರ್ಭದಲ್ಲಿ ಕೇವಲ ಆಶ್ವಾಸನೆಯನ್ನು ಕೊಡುತ್ತಾ ಸಾಗುವ,

ಮಂತ್ರ ಮುಗ್ಧ ಮಾತುಗಳಿಂದಲೇ ಅಮೂಲ್ಯ ಅಧಿಕಾರವನ್ನು ಪಡೆಯುವ, ಜನರ ಮುಗ್ಧತೆಯನ್ನು ತಮ್ಮ ಸ್ವಾರ್ಥಕ್ಕೆ ಬಳಸಿಕೊಳ್ಳುತ್ತಿರುವುದನ್ನು ವಿಡಂಬಿಸಿದ್ದಾರೆ. ಪ್ರಜಾತಂತ್ರ ವ್ಯವಸ್ಥೆಯಲ್ಲಿ ಪ್ರತಿಯೊಬ್ಬನ ಸಮಸ್ಯೆಯು ಮುಖ್ಯ ಎಂಬ ಅರಿವು ಇಲ್ಲಿನ ಅಧಿಕಾರಶಾಹಿಗಳಿಗೆ ಇಲ್ಲ. ದೊಡ್ಡ ದೊಡ್ಡ ಮಾತುಗಳ ಹಿಂದೆ ಬಿದ್ದಿರುವ ಇವರು ವಾಸ್ತವವನ್ನೇ ಮರೆತಿದ್ದಾರೆ. ಈ ರೀತಿಯ ಪ್ರಭುತ್ವಕ್ಕೆ ಲಂಕೇಶರು ಪರ್ಯಾಯವನ್ನು ಹೇಳುವುದು ಗಾಂಧೀವಾದದ ಮುಖಾಂತರ. ಹಾಗಾಗಿಯೇ ಲಂಕೇಶರು ಗಾಂಧೀತತ್ವವನ್ನು "ನಮ್ಮದು ಗಾಂಧೀ ಹುಟ್ಟಿದ ದೇಶ, ಗಾಂಧೀ ಮೊದಲು ಮಾತಿಗಿಂತ ಕಾಯಕಕ್ಕೆ ಮಹತ್ವ ಕೊಟ್ಟವರು, ಎಲ್ಲರಿಗೂ ಸ್ವಾವಲಂಬನೆಯ ದಾರಿಯನ್ನು ತೋರಿಸಿದವರು. ಎಲ್ಲರಿಗೂ ದುಡಿದು ಉಣ್ಣುವ ತತ್ವ ಕಲಿಸಿದರು. ಗಾಂಧಿ ಕಟ್ಟಿಸಿಕೊಂಡ ಸುಖೀ ರಾಜ್ಯದಲ್ಲಿ ಅಧಿಕಾರವೆನ್ನುವುದು ಖಾಸಗಿಯಾಗಿರಬೇಕು ಎಂದು ತಿಳಿಸಿದ್ದರು. ನಮ್ಮ ನಾಯಕರು ಅಧಿಕಾರವನ್ನು ಪಡೆಯುವ ಹಂಬಲದಲ್ಲಿ ಸಾಮಾನ್ಯರ ಮೇಲೆ ಮಿತಿಮೀರಿದ ಒತ್ತಡವನ್ನು ತರಬಾರದು, ಜನರ ಆಯ್ಕೆಗೆ ಬಿಡಬೇಕು. ಅವರ ಸ್ವಂತಿಕೆಯನ್ನು ನಾಶ ಮಾಡಬಾರದು ಎಂಬುದು ಗಾಂಧೀತತ್ವವಾಗಿತ್ತು ಎಂದು ವ್ಯಾಖ್ಯಾನಿಸಿದ್ದಾರೆ. ಇಲ್ಲಿ ಲಂಕೇಶರಿಗೆ ಗಾಂಧೀ ಮುಖ್ಯವಾಗುವುದು ಅವರು ಮಾತಿಗಿಂತ ಕೃತಿಗೆ ಮಾನ್ಯತೆ ಕೊಟ್ಟರು ಎನ್ನುವ ಕಾರಣಕ್ಕೆ ಅಧಿಕಾರ ಸ್ಥಾನದಲ್ಲಿರುವವರಿಗೆ ಕೆಲವು ಮೂಲಭೂತ ಅರ್ಹತೆ ಹಾಗೂ ಅನುಭವವಿರಬೇಕು ಎಂಬ ನಿಯಮ ವಿಧಿಸಿದ್ದಕ್ಕಾಗಿ. ಆದರೆ ಇಂದು ವಾಚಿವೀರ್ಯ ರಾಜಕೀಯ ಸಂಸ್ಕೃತಿ ವಾಸ್ತವವನ್ನು ಮರೆತಾಗ ಗಾಂಧೀ ಮುಖಾಂತರ ಚಿಕಿತ್ಸೆಯನ್ನು ಲಂಕೇಶರು ನೀಡಲು ಬಯಸುತ್ತಾರೆ.

**೩. ಜಾತಿ ಪದ್ಧತಿಯಿಂದ ಪ್ರತಿಭೆಗೆ ಮಾನ್ಯತೆ ದೊರೆಯದಿರುವುದು :**

ನಮ್ಮ ರಾಜಕೀಯ ಹಾಗೂ ಸಾಮಾಜಿಕ ವ್ಯವಸ್ಥೆಯಲ್ಲಿ ಜಾತಿ ಎಂಬುದು ಅತ್ಯಂತ ನಿರ್ಣಾಯಕ ಪಾತ್ರವನ್ನು ವಹಿಸುತ್ತದೆ. ಸಮಾಜದ ಮೇಲುವರ್ಗದವರು ತಮ್ಮ ಶಕ್ತಿಯಿಂದ ವಿದ್ಯೆಯನ್ನು ಕಲಿತು ಸಮಾಜದಲ್ಲಿ ಉನ್ನತ ಸ್ಥಾನ-ಮಾನಗಳನ್ನು ತಮ್ಮದಾಗಿಸಿಕೊಳ್ಳುತ್ತಿದ್ದಾರೆ. ಹಾಗೆಯೇ ಪ್ರಜಾಪ್ರಭುತ್ವ ವ್ಯವಸ್ಥೆಯಲ್ಲಿಯೂ ಪ್ರತಿಬಾರಿಯೂ ಅವರ ಪಕ್ಷ ಅಥವಾ ಅವರ ವಂಶದವರೇ ಅಧಿಕಾರವನ್ನು ಹಿಡಿಯುತ್ತಿರುವುದು ಈ ದಿನಗಳಲ್ಲಿಯ ಒಂದು ದುರಂತವೇ ಸರಿ. ಒಂದೇ ವರ್ಗದ ಸ್ಥಿತಿವಂತರು ಅಧಿಕಾರವನ್ನು ಹಿಡಿಯುವುದರಿಂದ ಸಾಮಾನ್ಯರ ಅಥವಾ ಕೆಳವರ್ಗದವರ ಕಷ್ಟಗಳು ಅವರಿಗೆ ಅರಿವಾಗುತ್ತಿಲ್ಲ. ಈ ರೀತಿಯ ಸಮಸ್ಯೆ ಬಗೆ ಹರಿಯಬೇಕಾದರೆ ಇಲ್ಲಿಯವರೆಗೆ ಯಾರು ಅಧಿಕಾರದಿಂದ ವಂಚಿತರಾಗಿದ್ದಾರೋ ಅವರ ಕೈಗೆ ಅಧಿಕಾರದ ಚುಕ್ಕಾಣಿ ಸಿಗಬೇಕು. ಲಂಕೇಶರು ಈ ರೀತಿಯ ಅಭಿಪ್ರಾಯವನ್ನು ಹೊಂದಿರುವುದರಿಂದಲೇ ಅವರು ದಲಿತನೊಬ್ಬ ಈ ದೇಶದ ಪ್ರಧಾನಿಯಾಗಲು ಸಾಧ್ಯವಾಗದ ವಿಷಾದವನ್ನು ಹೇಳುತ್ತಲೇ ಆತನು ಅಧಿಕಾರದ ಚುಕ್ಕಾಣಿ ಹಿಡಿಯಬೇಕಾದ ಅನಿವಾರ್ಯತೆಯನ್ನು

ಸೂಚಿಸುತ್ತಾರೆ. ಈ ರೀತಿಯ ಅಧಿಕಾರ ನೀಡುಪಿಕೆ ಕೇವಲ ರಾಜಕೀಯ ತಂತ್ರದ ಒಂದು ಭಾಗವಾಗಿ ಮಾತ್ರವಲ್ಲ, ಗಾಂಧೀ ಕಂಡ ಭಾರತದ ನಿರ್ಮಾಣಕ್ಕಾಗಿ ಕೂಡ ಮುಖ್ಯವಾಗಿದೆ. ಆದರೆ ಈ ರೀತಿಯ ಯೋಚನೆಯೇ ನಮ್ಮ ಆಳುವವ ವ್ಯವಸ್ಥೆಯಲ್ಲಿಲ್ಲ. ಆದ್ದರಿಂದಲೇ ಲಂಕೇಶರು ಜಗಜೀವನ ರಾಮು 'ಛೇರ್‌ಮನ್' ಆಗಲಾರದ ಸಂಕಟವನ್ನು ಕವಿಯಂತೆ ವರ್ಣಿಸುತ್ತಾರೆ. "ಶತ-ಶತಮಾನಗಳಿಂದ ಕಪ್ಪು ಜನರು ಬಿಳಿಯರಿಂದ ಶೋಷಣೆಗೆ, ಅನ್ಯಾಯ, ಅವಮಾನಗಳಿಗೆ ಒಳಗಾಗಿದ್ದಾರೆ, ಒಳಗಾಗುತ್ತಿದ್ದಾರೆ. ಈ ಕಪ್ಪು ಬಣ್ಣದ ಹಿಂದೆ ದೇಶದ ಅರ್ಧ ಶತಮಾನದ ಕಪ್ಪು ಜನರ ಶೋಷಣೆ, ವಿಷಾದ ಇದೆ, ಗಾಂಧೀ ಕಂಡ ಕನಸು ಇದೆ. ಮೇಲುಜಾತಿಯವರ ಅಹಂಕಾರವಿದೆ. ಚರಣಪ್ಪನಂತಹ ದುರಂಹಕಾರಿ ನಾಯಕರ ಶೋಷಣೆ ಇದೆ."[೮] ಮೇಲುಜಾತಿಯವರ ತುಳಿತಕ್ಕೆ ಗುರಿಯಾಗಿ ತನ್ನ ಮತ್ತು ತನ್ನವರ ನೋವನ್ನು ತಾನೇ ಅನುಭವಿಸುತ್ತಿದ್ದಾನೆ. ಇದರ ವಿರುದ್ಧ ಯಾವುದೇ ಹೋರಾಟ ಅಥವಾ ಧಿಕ್ಕಾರ ಮಾಡುತ್ತಿಲ್ಲ ಮತ್ತು ಇವನ ಬೆಂಬಲಕ್ಕೆ ಯಾರೂ ಸಹಕರಿಸುತ್ತಿಲ್ಲ. ಆದ್ದರಿಂದ ಒಂಟಿಯಾಗುಳಿಯುತ್ತಿದ್ದಾನೆ. ಈತನಿಗೆ ಅಧಿಕಾರ ದೊರೆತರೆ ಆಗ ತನ್ನ ಆದರ್ಶಗಳಿಂದ ಸಮಾಜಕ್ಕೆ ಒಳ್ಳೆಯದನ್ನು ಮಾಡಬಹುದು. ಆಗ ನಿಜವಾದ ಪ್ರಜಾಪ್ರಭುತ್ವ ವ್ಯವಸ್ಥೆಗೆ ಒಂದು ಅರ್ಥ ಬರುತ್ತದೆ. ಈ ಮಣ್ಣಿನ ಮಗ ತನ್ನ ಸಾಂಸ್ಕೃತಿಕ ವ್ಯಕ್ತಿತ್ವದಿಂದ ಹಿಂದಿನ ಎಲ್ಲಾ ಅನ್ಯಾಯಗಳನ್ನು ಸರಿಪಡಿಸಿ ರಾಜಕೀಯದಲ್ಲಿ ಒಂದು ಅದಮ್ಯ ವಿಶ್ವಾಸ ಜನರಲ್ಲಿ ಉಂಟಾಗುತ್ತದೆ. ಮೇಲುವರ್ಗದವರ ರಾಜಕೀಯ ಆಟಗಳೆಲ್ಲ ಬಯಲಾಗಿ ಹೊಸ ಬದಲಾವಣೆ ಉಂಟಾಗುತ್ತದೆ.

ಕಪ್ಪು ಬಣ್ಣದ ಈ ನೋವನ್ನು ಹೋಗಲಾಡಿಸಬೇಕಾದರೆ ಅಲ್ಲಿಂದಲೇ ಬಂದವನೊಬ್ಬ ಅಧಿಕಾರವನ್ನು ಹಿಡಿಯಬೇಕು. ಆಗ ಮಾತ್ರ ಈ ರಾಜಕೀಯ ಸಂಸ್ಕೃತಿಗೆ ಆದಮ್ಯ ಆತ್ಮವಿಶ್ವಾಸ ಬರಲು ಸಾಧ್ಯ ಎಂಬ ನಿಲುವು ಲಂಕೇಶರದ್ದು.

**೪. ಪ್ರಾಮಾಣಿಕತೆಯ ಆಶಯ :**

ಪ್ರಜಾಪ್ರಭುತ್ವ ದೇಶಗಳಲ್ಲಿ ಅಧಿಕಾರ ಹಿಡಿಯುವುದು ಮುಖ್ಯವಾದುದು ಎಂಬ ಮಾತು ನಿಜ. ಆದರೆ ಅಧಿಕಾರವನ್ನು ಹಿಡಿಯದೆಯೂ ದೇಶ ಸೇವೆಯನ್ನು ಮಾಡಲು ಸಾಧ್ಯ. ಇದನ್ನು ಭಾರತಕ್ಕೆ ಮೊದಲು ತೋರಿಸಿಕೊಟ್ಟವರು ಗಾಂಧೀ. ಈ ದೇಶದಲ್ಲಿರುವ ಜಾತಿ, ಬಡತನ, ಅಸಮಾನತೆ ಮತ್ತು ನಿರುದ್ಯೋಗ ಮುಂತಾದ ಕೆಲವು ಸಮಸ್ಯೆಗಳಿಗೆ ಗಾಂಧೀ ತನ್ನದೇ ಆದ ರೀತಿಯಲ್ಲಿ ಕೆಲವು ಪರಿಹಾರ ಮಾರ್ಗಗಳನ್ನು ತೋರಿಸಿದ್ದರು. ಅಧಿಕಾರವಿಲ್ಲದೆಯೂ ಜನರ ಮನಸ್ಸಿನಲ್ಲಿ ಉಳಿದ ಗಾಂಧೀ ಲಂಕೇಶರಿಗೆ ಮುಖ್ಯರಾಗುತ್ತಾರೆ. ಅವರಲ್ಲಿದ್ದ ಪ್ರಾಮಾಣಿಕತೆಗೆ ಸ್ವತಂತ್ರ್ಯಾ ನಂತರ ಆ ರೀತಿಯ ವ್ಯಕ್ತಿತ್ವವನ್ನು ಲಂಕೇಶರು ಗುರುತಿಸುವುದು ಸರ್ವೋದಯ ನಾಯಕರಾದ ಜಯಪ್ರಕಾಶ ನಾರಾಯಣರಲ್ಲಿ. "ಜೆ.ಪಿ. ಈ ಪ್ರಾಮಾಣಿಕ ವ್ಯಕ್ತಿತ್ವದ ಮುಂದೆ

ಸಮಾಜದಲಿದ್ದ ಭ್ರಷ್ಟಾಚಾರ, ಕೊಲೆ ಮತ್ತು ದರೋಡೆಯಂತಹ ಸಮಸ್ಯೆಗಳು ಕಣ್ಮರೆಯಾಗುತ್ತಿದ್ದವು. ಅವರಿಗೆ ಅಧಿಕಾರದ ಶಕ್ತಿಯಾಗಲಿ, ಸರ್ಕಾರದ ರಕ್ಷಣೆಯ ಬೆಂಬಲವಾಗಲಿ ಇರಲಿಲ್ಲ."[೬] ಈತ ಅನೇಕ ಹಳ್ಳಿಗಳನ್ನು ಕಾಲು ನಡಿಗೆಯಲ್ಲಿಯೇ ಸುತ್ತಿ ಅಲ್ಲಿನ ಜನರ ಕಷ್ಟಗಳಿಗೆ ತನ್ನದೇ ಆದ ರೀತಿಯಲ್ಲಿ ಪರಿಹಾರ ಹೇಳುತ್ತಾ ಜನರನ್ನು ಸಂಘಟಿಸುತ್ತಾ ಅಸಹಾಯಕರಿಗೆ ಸಾಂತ್ವಾನವನ್ನು ಹೇಳಿ, ಜನರಲ್ಲಿ ಬದುಕಿನ ಬಗ್ಗೆ ಆಸಕ್ತಿಯನ್ನು ಮೂಡಿಸಿದನು. ಈತನ ಮಾನವೀಯ ಗುಣದ ಮುಂದೆ ಸಮಾಜದಲ್ಲಿರುವ ಎಲ್ಲಾ ಸಮಸ್ಯೆಗಳು ಕರಗುತ್ತಿದ್ದವು. ಎಲ್ಲಾ ಜಾತಿಯವರು ಈತನ ವ್ಯಕ್ತಿತ್ವಕ್ಕೆ ಮಾರು ಹೋದರು. ಇಂತಹ ಮಾನವೀಯ ಸಮಾನತೆಯ ಶಾಂತಿಯ ಪ್ರತಿರೂಪದ ಪ್ರಾಮಾಣಿಕ ಮನಸ್ಸುಗಳು ಮಾತ್ರ ಈ ದೇಶವನ್ನು ಕಾಯಬಲ್ಲವು, ಕಟ್ಟಬಲ್ಲವು ಎಂಬುದು ಲಂಕೇಶರ ಅಭಿಪ್ರಾಯವಾಗಿದೆ.

**೫. ಸಂಪನ್ನರ ಗುಂಪಿನ ಮಹತ್ವ :**

ಭಾರತೀಯ ಸಮಾಜದ ಜನರನ್ನು ವಿದ್ಯೆ, ಹಣ, ಇತ್ಯಾದಿ ಆಧಾರದಿಂದ ವಿಂಗಡಿಸಿದರೆ ಅಲ್ಲಿ ಮೇಲು, ಕೆಳ ಮತ್ತು ಮಧ್ಯಮ ವರ್ಗಗಳನ್ನಾಗಿ ವಿಂಗಡಿಸಬಹುದು. ಇಲ್ಲಿನ ಮಧ್ಯಮವರ್ಗದ ಗುಂಪನ್ನು ಲಂಕೇಶರು 'ಸಂಪನ್ನರ ಗುಂಪು' ಎನ್ನುತ್ತಾರೆ. ಸಮಾಜದ ಮೇಲುವರ್ಗದವರು ತಮ್ಮಲ್ಲಿರುವ ವಿದ್ಯೆ, ಹಣ ಇತರೆ ಮೂಲಗಳಿಂದ ಉನ್ನತ ಅಧಿಕಾರ ಹಿಡಿದು ಸ್ಥಿತಿವಂತರಾಗುತ್ತಾ ತಮ್ಮದೇ ಆದ ಭ್ರಮಾಲೋಕದಲ್ಲಿ ವಿಹರಿಸುತ್ತಿದ್ದಾರೆ. ಕೆಳವರ್ಗದವರು ವಿದ್ಯೆ, ಹಣದಿಂದ ವಂಚಿತರಾಗಿ ಅನೇಕ ಸಮಸ್ಯೆಗಳಿಂದ ತತ್ತರಿಸಿ ಒಂದು ರೀತಿಯಲ್ಲಿ ಶೋಷಣೆಯ ಬದುಕನ್ನ ಸವೆಸುತ್ತಿದ್ದಾರೆ. ಮಧ್ಯಮವರ್ಗದವರು ಈ ಸಮಾಜದ ಸಂಪನ್ನರು. ಕಾರಣ ಇವರಲ್ಲಿ ಅನೇಕರು ಬುದ್ಧಿವಂತರಿದ್ದಾರೆ, ಸ್ವಾಭಿಮಾನಿಗಳಿದ್ದಾರೆ. ಸಮಾಜದ ಕೆಲವು ಸಮಕಾಲೀನ ಸಮಸ್ಯೆಗಳಿಗೆ ಸ್ಪಂದಿಸುವವರಿದ್ದಾರೆ. ಹೊಸ-ಹೊಸ ಬದಲಾವಣೆಗಳಿಗಾಗಿ ಪ್ರಯುತ್ನಿಸುವವರಿದ್ದಾರೆ. ಆಡಳಿತ ವ್ಯವಸ್ಥೆಯನ್ನ ಟೀಕಿಸುವವರಿದ್ದಾರೆ. ಇವರಿಗೆ ಯಾವುದೇ ಅತಿಯಾದ ಆಸೆಗಳು, ಉನ್ನತ ಅಧಿಕಾರಗಳನ್ನು ಪಡೆಯುವ ಆಸೆಗಳಿರುವುದಿಲ್ಲ. ಆಡಳಿತ ವರ್ಗದವರ ಸಮಾರಂಭಗಳಲ್ಲಿ ಪ್ರೇಕ್ಷಕರಾಗಿ ಭಾಗವಹಿಸುತ್ತಾರೆ. ಬೇರೆಯವರಿಗೆ ತೊಂದರೆಯನ್ನ ಕೊಡದೆ ತಮ್ಮ ವ್ಯಾಪ್ತಿಯಲ್ಲಿಯೇ ಬದುಕುತ್ತಾರೆ. ಇವರಿಗೆ ಯಾವುದೇ ಲಂಚ ಸಿಗುವುದಿಲ್ಲ. ಆದ್ದರಿಂದ ಇವರು ತಮ್ಮ ಕರ್ತವ್ಯಗಳನ್ನು ಪ್ರಾಮಾಣಿಕವಾಗಿ ನಿರ್ವಹಿಸುತ್ತಿದ್ದಾರೆ. ರಾಜಕಾರಣಿಗಳ ಒಣ ಘೋಷಣೆಗಳಿಗೆ ಇವರು ಒಳಗಾಗುವುದಿಲ್ಲ. ಯಾವುದು ಬೇಕು, ಯಾವುದು ಬೇಡ ಎಂದು ನಿರ್ಧರಿಸುವವರು ಇವರೇ ಸಮಾಜದ ಆಗು-ಹೋಗುಗಳ ಬಗ್ಗೆ ಇವರಿಗೆ ಸಮುದಾಯ ಪ್ರಜ್ಞೆ ಇರುತ್ತದೆ. ಇಂತಹ ಸಂಪನ್ನರ ಗುಂಪು ಸಾಮುದಾಯಿಕ

ಪ್ರಜ್ಞೆಯನ್ನು ಪ್ರಾಮಾಣಿಕತೆಯನ್ನು ಇಟ್ಟುಕೊಂಡಿರುವುದರಿಂದ ದೇಶದ ಸ್ಥಿತಿಯನ್ನ ನಿರ್ಧರಿಸುವ ಶಕ್ತಿಯಿರುವುದರಿಂದ ಲಂಕೇಶರಿಗೆ ಮಹತ್ವದ್ದಾಗಿ ಕಾಣಿಸಿದೆ.

**೬. ನೀನು ನನ್ನೊಳಗೋ :**

ಲಂಕೇಶರು ಭಾರತೀಯ ರಾಜಕೀಯ ವ್ಯವಸ್ಥೆಯ ಒಂದು ಪಿಡುಗಾದ ಪಕ್ಷಾಂತರವನ್ನು ಒಂದು ರೀತಿಯ ವ್ಯಭಿಚಾರ ಎಂಬ ನೆಲೆಯಲ್ಲಿ ನೋಡುತ್ತಾರೆ. ಕಾರಣವಿಷ್ಟೇ ನಮ್ಮ ಕೆಲವು ನಾಯಕರು ಪಕ್ಷಾಂತರ ಮಾಡಲು ಮುಖ್ಯ ಕಾರಣ, ಅಧಿಕಾರಕ್ಕಾಗಿ– ಅಧಿಕಾರ, ಹಣಕ್ಕಾಗಿ–ಹಣ ಇವೇ ನಿಜವಾದ ಜೀವನ ಎಂಬ ಪ್ರಬಲವಾದ ನಂಬಿಕೆ. ಇಂತಹ ದ್ವಂದ್ವ ನೀತಿಯಿಂದ ಯಾವುದೇ ರೀತಿಯ ಪ್ರಯೋಜವಾಗುವುದಿಲ್ಲ. ಈ ಅಧಿಕಾರ, ಹಣಕ್ಕಾಗಿ ಮಾತ್ರ ಬೆಂಬತ್ತಿದರೆ ದೇಶದಲ್ಲಿ ಅರಾಜಕತೆ ಉಂಟಾಗುತ್ತದೆ. ಆದರೆ ಇಂದು ನಮ್ಮ ಪಕ್ಷಾಂತರ ರಾಜಕಾರಣಿಗಳು ಇದೇ ರೀತಿಯ ತತ್ವವನ್ನು ಬೆಂಬತ್ತಿದ್ದಾರೆ. ಆದ್ದರಿಂದಲೇ ಲಂಕೇಶರ ದೃಷ್ಟಿಯಲ್ಲಿ ಇವರು ತತ್ವವಿಲ್ಲದವರು, ವ್ಯಭಿಚಾರಿಗಳು. ತಮ್ಮ ಬಗ್ಗೆ ತಮಗೆ ಅಸ್ತಿತ್ವವಿಲ್ಲದವರಾಗಿ ಇವರನ್ನು ನಂಬಿದ ಪಕ್ಷದ ಜನರಿಗೆ ದ್ರೋಹ ಬಗೆಯುವರಾಗಿ ಕಂಡಿದ್ದಾರೆ. ಇಂತವರಿಂದ ಪ್ರಜಾಪ್ರಭುತದಲ್ಲಿ ಬದಲಾವಣೆಯು ಅರ್ಥಹೀನವಾಗುವಂತೆ ಗೋಚರಿಸುತ್ತದೆ. ಇಲ್ಲಿ ಪಕ್ಷಾಂತರಿಗಳು ಮಾತ್ರ ಲಂಕೇಶರ ಕೋಪಕ್ಕೆ ಗುರಿಯಾಗುವುದಿಲ್ಲ. ಅವರನ್ನು ಆಯ್ಕೆ ಮಾಡಿದ ಮತದಾರರು ಕೂಡ ಜಾಡಿಸುವಿಕೆಗೆ ಒಳಗಾಗುತ್ತಾರೆ. ಲಂಕೇಶರ ಪ್ರಕಾರ ಪಕ್ಷಾಂತರ ಸಮಸ್ಯೆ ಉಂಟಾಗಲು ಪ್ರಮುಖ ಕಾರಣರಾದವರು ಮತದಾರರು. ಮತದಾರರಿಗೆ ಸರಿಯಾಗಿ ತಿಳುವಳಿಕೆ ಇಲ್ಲದೆ ಇಂಥ ನಾಯಕರನ್ನು ಆಯ್ಕೆ ಮಾಡುತ್ತಿರುವುದರಿಂದ ಪಕ್ಷಾಂತರದ ಪಿಡುಗು ಉಂಟಾಗುತ್ತಿದೆ. ಮತದಾರ ಮತ್ತು ರಾಜಕಾರಣಿಗಳು ನಾಣ್ಯದ ಎರಡು ಮುಖಗಳಿದ್ದಂತೆ. ವಿರೋಧ ಮತ್ತು ಸ್ವೀಕಾರದ ಸ್ಥಿತಿ ಇದ್ದಾಗ ಮಾತ್ರ ಪ್ರಜಾಪ್ರಭುತ್ವದ ವ್ಯವಸ್ಥೆಯಲ್ಲಿ ಗಟ್ಟಿತನ ಉಳಿಯುತ್ತದೆ ಎಂಬುದು ಲಂಕೇಶರ ನಿಲುವು.

**೭. ರಾಜಕಾರಣಿಗಳ ಸೋಗಲಾಡಿತನದ ಬಗ್ಗೆ ಆಕ್ರೋಶ :**

ಸಮಾಜದ ಸಾಮಾನ್ಯ ಜನರಲ್ಲಿ ಪರಸ್ಪರ ಹೇಗೆ ದ್ವೇಷ–ವೈಷಮ್ಯಗಳಿರುವಂತೆ, ಜಾತಿ–ಸಂಘರ್ಷಗಳಿರುವಂತೆ ನಮ್ಮ ರಾಜಕಾರಣಿಗಳಲ್ಲಿಯೂ ಈ ದುರ್ಗಣಗಳನ್ನು ಗುರುತಿಸಬಹುದಾಗಿದೆ. ಇದು ಲಂಕೇಶರಲ್ಲಿ ಆಕ್ರೋಶವನ್ನು ಹುಟ್ಟಿಸುತ್ತದೆ. ಸಮಾಜದಲ್ಲಿ ಶಾಂತಿ, ನೆಮ್ಮದಿ ಮತ್ತು ಸಮಾನತೆಯನ್ನು ನಿರ್ಮಾಣ ಮಾಡಬೇಕಾಗಿರುವ ನಮ್ಮ ನಾಯಕರುಗಳಲ್ಲಿಯೇ ಅನುಮಾನ, ಸಂದೇಹಗಳನ್ನು ಗಮನಿಸಬಹುದಾಗಿದೆ. ಹೊರಗಡೆ ಮಾತ್ರ ಮಿತ್ರರಂತೆ ವರ್ತಿಸುತ್ತಾರೆ. ಯಾರಿಗೂ ಅನುಮಾನ ಬರದಂತೆ ನಡೆದುಕೊಳ್ಳುತ್ತಾರೆ. ಆದರೆ ಪ್ರತಿಯೊಬ್ಬರೂ ಇನ್ನೊಬ್ಬರ ಮೇಲೆ ಕತ್ತಿಯನ್ನು ಮಸೆಯುತ್ತಿದ್ದಾರೆ. ಒಂದು ಪಕ್ಷಕ್ಕೆ ನೈತಿಕ

ಬೆಂಬಲವನ್ನು ನೀಡುತ್ತೇನೆಂದು ಮತ್ತೊಬ್ಬರಿಗೆ ಸಹಾಯ ಮಾಡುತ್ತಿರುವುದು ಕೇವಲ ತೋರಿಕೆಯ ನೆರವಾಗುತ್ತದೆ. ಇಂಥ ಸೋಗಲಾಡಿ ನಾಯಕರುಗಳು ಆತ್ಮದ್ರೋಹಿಗಳಾಗಿ ಜನರ ಸಾಮಾಜಿಕ ಜೀವನದಿಂದ ದೂರ ಉಳಿಯುತ್ತಾ ವಂಚಕರಾಗಿ ಅಪ್ರಮಾಣಿಕರಾಗುತ್ತಿದ್ದಾರೆ. ಇಂತಹ ಸೊಗಲಾಡಿ ರಾಜಕಾರಣವು ಅಪಾಯಕಾರಿ ಎಂಬ ನಿಲುವು ಲಂಕೇಶರದ್ದಾಗಿದೆ.

**೮. ರಾಜಕಾರಣಿ ಮತ್ತು ಬಂಡವಾಳಶಾಹಿ ಸಂಬಂಧ :**

ಸ್ವತಂತ್ರ್ಯವನ್ನು ಕುರಿತು ಡಾ. ಸಿದ್ಧಲಿಂಗಯ್ಯನವರ ಕವನವೊಂದು "ಬಡವರ ಮನೆಗೆ ಬರಲೇ ಇಲ್ಲ ಬೆಳಕಿನ ಕಿರಣ ತರಲೇ ಇಲ್ಲ"[೧೦] ಎಂದು ವಿಷಾದಿಸುತ್ತದೆ. ಹಾಗೆಯೇ ಲಂಕೇಶರು ಸ್ವಾತಂತ್ರ್ಯವು ಕೇವಲ ಉಳ್ಳವರ ಸ್ವತ್ತಾಗಿರುವುದಕ್ಕೆ ವಿಷಾದವನ್ನು ತಾಳುತ್ತಾರೆ. ಸಾಮಾನ್ಯನೊಬ್ಬ ಈ ರಾಜಕಾರಣ ಮತ್ತು ಬಂಡವಾಳಶಾಹಿಯ ಆಕ್ರಮ ಸಂಬಂಧದೆದುರಿಗೆ ಗೆದ್ದು ಬರಲು ಸಾಧ್ಯವಾಗದ ಸ್ಥಿತಿಯನ್ನು ಅವರು ಗುರುತಿಸುತ್ತಾರೆ. ಅವರ ವಿಷಾದವಿರುವುದು ಮುಂದೆ ಸೂಚಿಸುವ ಕಾರಣಕ್ಕಾಗಿ. "ಬ್ರಿಟಿಷರ ಆಕ್ರಮಣಕ್ಕೆ ಒಳಗಾಗಿ ಅವರಿಂದ ಶಿಕ್ಷೆ ಅವಮಾನವನ್ನು ಅನುಭವಿಸಿ ಗುಲಾಮರಾಗಿ ಆ ಬಂಧನದಿಂದ ಬಿಡುಗಡೆಯನ್ನು ಪಡೆದು ಸ್ವತಂತ್ರಕ್ಕಾಗಿ ಎಲ್ಲರೂ ಹಂಬಲಿಸುತ್ತಿರುವಾಗ ನಮ್ಮ ಜಾತ್ಯಾತೀತ ಪ್ರಜಾವ್ಯವಸ್ಥೆಯ ರಾಜಕಾರಣಿಗಳು ಇಂದು ಸಮಾಜದ ಬಂಡವಾಳಶಾಹಿಗಳ, ದುರಂಹಕಾರಿಗಳ ಕೈಗೊಂಬೆಗಳಾಗುತ್ತಿದ್ದಾರೆ. ದೇಶದ ಎಲ್ಲಾ ರಂಗಗಳಲ್ಲಿಯೂ ಇವರದೇ ಕಾರುಬಾರು. ಟಾಟಾ. ಬಿರ್ಲಾರಂಥವರ ಕೈಗೆ ದೇಶದ ಅಧಿಕಾರ ಸಿಕ್ಕಿ ನಲುಗುತ್ತಿದೆ. ಗಾಂಧೀಯ ಕನಸು ಈ ದೇಶದಲ್ಲಿ ಎಲ್ಲದರಲ್ಲಿಯೂ ಬಿಡುಗಡೆ ಸ್ವಾವಲಂಬನೆಯದ್ದಾಗಿತ್ತು. ಆದರೆ ಇಂದು ಇದು ವಿರುದ್ಧವಾಗುತ್ತಿದೆ. ರಾಜಕೀಯದ ಅರ್ಥ ಗೊತ್ತಿಲ್ಲದವರು ಅಧಿಕಾರವನ್ನು ಹಿಡಿದು ದೇಶ ದಿವಾಳಿಯಾಗುತ್ತಿದೆ. ಆಡಳಿತ ಯಂತ್ರ ಕುಸಿಯುತ್ತಿದೆ. ಇದು ಈ ದೇಶದ ರಾಜಕೀಯ ದುರಂತ" ಎನ್ನುವುದಕ್ಕಾಗಿ ಈ ರೀತಿಯ ಬಂಡವಾಳಶಾಹಿ ಮತ್ತು ರಾಜಕಾರಣದ ಅಕ್ರಮ ಸಂಬಂಧದ ನಿರಾಕರಣೆಯೇ ಲಂಕೇಶರ ಮುಖ್ಯ ನೆಲೆಯಾಗಿದೆ.

**೯. ರಾಜಕೀಯ ಮತ್ತು ಧರ್ಮ :**

ಭಾರತದಂತಹ ದೇಶಗಳಲ್ಲಿ ಧರ್ಮ ಎನ್ನುವುದು ಕೇವಲ ಖಾಸಗಿಯಾದ ನಂಬಿಕೆ ಮತ್ತು ಆಚರಣೆಯ ಪ್ರಪಂಚ ಮಾತ್ರವಲ್ಲ. ಬದಲಿಗೆ ರಾಜಕಾರಣದ ದಿಕ್ಕು ದೆಸೆಗಳನ್ನು ನಿರ್ಧರಿಸುವ ನಿಯಂತ್ರಕ ಶಕ್ತಿಯೂ ಹೌದು. ಖಾಸಗಿಯಾಗಬೇಕಾದ ಧರ್ಮ ದೇವತೆಗಳು ಇಲ್ಲಿ ಸಾರ್ವತ್ರಿಕ ಜೀವನಕ್ಕೆ ಬಂದು ಆಳತೊಡಗುತ್ತವೆ. ಈ ರೀತಿ ಧರ್ಮವು ಸಾರ್ವತ್ರಿಕ ನೆಲೆಗೆ ಬರುವುದನ್ನು ಲಂಕೇಶರು ವಿರೋಧಿಸುತ್ತಾರೆ. ಈ ವಿರೋಧಕ್ಕೆ ಅವರು ನೀಡುವ ಕಾರಣ ಭಾರತ ಗಾಂಧೀ ಕಂಡ ಕನಸಿನ ನಾಡು ಇಲ್ಲಿ ಯಾವುದೇ ಮೂಡನಂಬಿಕೆ ಜಾತಿ, ಕಂದಾಚಾರಿಗಳಿಗೆ

ಜಾಗವಿರಬಾರದು. ಭಾರತದಲ್ಲಿರುವ ಎಲ್ಲಾ ಧರ್ಮಗಳು ಖಾಸಗಿಯಾಗಿರಬೇಕು. ಗಾಂಧೀ ಈ ದೇಶದ ಎಲ್ಲರಿಗೂ ಸ್ವಾವಲಂಬನೆಯ ದಾರಿಯನ್ನ ತೋರಿಸಿದವರು. ಪ್ರತಿಯೊಬ್ಬನೂ ತಾನು ಮಾಡುವ ಕೆಲಸದ ಬಗ್ಗೆ ಆತ್ಮವಿಶ್ವಾಸವನ್ನು ಹೊಂದಿರಬೇಕು. ಹಾಗೆಯೇ ರಾಜಕಾರಣಿಯಾದವನಿಗೆ ಅಧಿಕಾರದ ವ್ಯಾಮೋಹವಿರಬಾರದು, ಪ್ರೀತಿ ಗೌರವವಿರಬೇಕು. ರಾಜಕೀಯದಲ್ಲಿ ಎಲ್ಲ ಧರ್ಮೀಯರೂ ಒಂದಾಗಬೇಕು. ಆಗ ಈ ದೇಶದ ವ್ಯವಸ್ಥೆಯಲ್ಲಿ ಒಂದು ಭದ್ರತೆ ಬರುತ್ತದೆ. ಬಹುಮುಖತೆಯಿಂದ ಏಕತೆಯನ್ನು; ಐಕ್ಯತೆಯನ್ನು ಸಾಧಿಸಿದರೆ ಮಾತ್ರ ಗಾಂಧೀಯು ರಾಮರಾಜ್ಯದ ಕನಸು ನನಸಾಗುತ್ತದೆ. ರಾಜಕೀಯದಲ್ಲಿ ಧರ್ಮಕ್ಕೆ ಪ್ರಾಧಾನ್ಯವಿರಬಾರದು. ಈ ಸ್ಥಿತಿಯಲ್ಲಿ ಮಾತ್ರ ಅಭಿವೃದ್ಧಿಯನ್ನ ಹೊಂದಲು ಸಾಧ್ಯ. ಜನರ ಹತ್ತಿರಕ್ಕೆ ಬರಲು ಸಾಧ್ಯವೆಂದು ಲಂಕೇಶರು ಭಾವಿಸುತ್ತಾರೆ. ಧರ್ಮ ಮತ್ತು ರಾಜಕಾರಣದ ಆಕ್ರಮ ಸಂಬಂಧಕ್ಕಿಂತ ಗಾಂಧೀ ಹೇಳಿದ ರಾಮರಾಜ್ಯ ಲಂಕೇಶರಿಗೆ ಮುಖ್ಯವಾಗುತ್ತದೆ.

**ವಿಶಿಷ್ಟತೆಗಳು :**

೧. ಭಾರತೀಯ ಸಂಸದೀಯ ಪ್ರಜಾಪ್ರಭುತ್ವ ವ್ಯವಸ್ಥೆಯನ್ನು ಪಂಚಾಯಿತಿಯ ಪ್ರತಿಮೆಯ ಮುಖಾಂತರ ಲಂಕೇಶರು ವಿವರಿಸುತ್ತಾರೆ. ರಾಜಕೀಯ ವಿಕೇಂದ್ರಿಕರಣದ ಬಗ್ಗೆ ಲಂಕೇಶರಿಗೆ ನಂಬಿಕೆ ಇದ್ದರೂ ಪಂಚಾಯಿತಿಯನ್ನು ನಿಯಂತ್ರಿಸುವುದು ಜಾತಿ, ಹಣ ಮತ್ತು ವರ್ಗ ಎಂಬ ವಾಸ್ತವದ ಅರಿವೂ ಇದೆ. ಈ ದೇಶದಲ್ಲಿ ಜಾತಿಯ ಜೊತೆಯಲ್ಲಿ ಜೀತವೂ ಜೀವಂತವಾಗಿರುವಲ್ಲಿ ವಿಷಾದ ಅವರಲ್ಲಿದೆ. ರೈತ ಹಿನ್ನೆಲೆಯಲ್ಲಿ ಬೆಳೆದು ಅಧಿಕಾರಕ್ಕೆ ಬಂದಾಗ ಕಿವಿ, ಕಣ್ಣು ಮತ್ತು ನೆನಪನ್ನು ಕಳೆದುಕೊಂಡ ಜನರು ರಾಜಕೀಯ ಸಂಸ್ಕೃತಿಯ ನಿರೂಪಣೆಯಲ್ಲಿ ತೊಡಗಿರುವುದು ಲಂಕೇಶರ ಪ್ರಜ್ಞೆಯನ್ನು ಕೆರಳಿಸಿದೆ.

೨. ಮಾತಿನ ಕರಾಮತ್ತಿನಲ್ಲಿ ವಾಸ್ತವವನ್ನು ಮರೆಯುವ, ಆಶ್ವಾಸನೆಗಳ ವಾಚಿವೀರ್ಯ ರಾಜಕಾರಣಿಗಳನ್ನು ಲಂಕೇಶರು ವಿಡಂಬಿಸುತ್ತಾರೆ. ಜನತಂತ್ರ ವ್ಯವಸ್ಥೆಯಲ್ಲಿ ಪ್ರತಿಯೊಬ್ಬ ವ್ಯಕ್ತಿಯ ಸಮಸ್ಯೆಯೂ ಮುಖ್ಯವಾಗಬೇಕು. ಆದರೆ ರಾಜಕಾರಣಿಗಳು ತಮ್ಮ ಮಂತ್ರ ಮುಗ್ಧ ಮಾತುಗಳಿಂದ ಜನರಲ್ಲಿ ನಂಬಿಕೆ ಹುಟ್ಟಿಸಿ ವಾಸ್ತವವನ್ನೇ ಮರೆಯುತ್ತಿದ್ದಾರೆ ಎನ್ನುವ ಕನಲಿಕೆ ಲೇಖಕರಿಗಿದೆ. ಆದರೆ ಈ ಕನಲಿಕೆಯನ್ನು ಸೂಚಿಸಿ ಸುಮ್ಮನಾಗದೆ ಈ ವಾಚಿವೀರ್ಯ ರಾಜಕೀಯ ಸಂಸ್ಕೃತಿಗೆ ಮಾತಿಗಿಂತ ಕೃತಿಗೆ ಮಹತ್ವ ಕೊಡುವ, ನೈತಿಕ ಮೌಲ್ಯಗಳಿಗೆ ಒತ್ತು ಹಾಕುವ ಗಾಂಧೀಚಿಂತನೆಯನ್ನು ಪರ್ಯಾಯವಾಗಿ ಮಂಡಿಸುತ್ತಾರೆ.

೩. ಮೇಲುವರ್ಗ, ಮೇಲುಜಾತಿಗಳಿಂದಲೇ ನಿಯಂತ್ರಿತವಾದ ರಾಜಕೀಯ ಸಂಸ್ಕೃತಿ ಅದನ್ನು ಮೀರಿದಾಗ ಮಾತ್ರ ಹೊಸ ಆಲೋಚನೆಗಳು ಬರಲು ಸಾಧ್ಯ. ಜೊತೆಗೆ ಹೊಸ ಬದಲಾವಣೆ ಸಾಧ್ಯ ಎಂಬುದು ಲಂಕೇಶರ ನಿಲುವು. ಒಬ್ಬ ದಲಿತ ದೇಶದ ಪ್ರಧಾನಿಯಾಗಬೇಕು ಎಂಬುದು ಕೇವಲ ಅನ್ಯಾಯವನ್ನು ಸರಿಪಡಿಸುವ ರಾಜಕೀಯ ತಂತ್ರಗಾರಿಕೆಯಲ್ಲಿ ಬದಲಿಗೆ ಗಾಂಧೀ ಕಂಡ ಕನಸಿನ ಸಾಕಾರವಾಗಿ ಲಂಕೇಶರಿಗೆ ಕಂಡಿದೆ. ತಳವರ್ಗದಿಂದ ಬಂದ ವ್ಯಕ್ತಿಯೊಬ್ಬ ಅಧಿಕಾರದ ಗದ್ದುಗೆಯನ್ನು ಏರಿದಾಗ ಆತ ತನ್ನ ಸಾಂಸ್ಕೃತಿಕ ವ್ಯಕ್ತಿತ್ವದಿಂದ ಹಿಂದಿನ ಎಲ್ಲಾ ಅನ್ಯಾಯಗಳನ್ನು ಸರಿಪಡಿಸಿ ರಾಜಕೀಯ ಸಂಸ್ಕೃತಿಗೆ ಅದಮ್ಯ ಚೈತನ್ಯವನ್ನು ತುಂಬುತ್ತಾನೆ ಎಂಬ ನಿಲುವು ಲಂಕೇಶರಲ್ಲಿದೆ.

೪. ಅಧಿಕಾರ ಹಿಡಿಯದೆಯೂ ದೇಶವನ್ನು ಕಟ್ಟಬಲ್ಲ ವ್ಯಕ್ತಿಗಳು ಲಂಕೇಶರಿಗೆ ಮುಖ್ಯವಾಗುತ್ತಾರೆ. ಗಾಂಧೀ ಮತ್ತು ಸರ್ವೋದಯ ನಾಯಕ ಜೆ.ಪಿ. ಅವರನ್ನು ಲಂಕೇಶ ಒಪ್ಪಿಕೊಳ್ಳುವುದು ಈ ಹಿನ್ನೆಲೆಯಲ್ಲಿಯೇ. ಜೆ.ಪಿ. ವ್ಯಕ್ತಿತ್ವದ ಮುಂದೆ ಭ್ರಷ್ಟಾಚಾರ, ಕೊಲೆ, ದರೋಡೆಯಂತಹ ಸಮಸ್ಯೆಗಳು ಕಣ್ಮರೆಯಾಗುತ್ತಿದ್ದುದು ಲಂಕೇಶರಿಗೆ ಸೋಜಿಗವಾಗಿ ಕಂಡಿವೆ.

ಇಂತಹ ಪ್ರಾಮಾಣಿಕ ಮನಸ್ಸುಗಳು ಮಾತ್ರ ದೇಶವನ್ನು ಕಟ್ಟಬಲ್ಲವು ಎಂಬುದು ಲಂಕೇಶರ ನಿಲುವು.

೫. ಭ್ರಮಾಲೋಕದಲ್ಲಿ ವಿಹರಿಸುವ ಮೇಲುವರ್ಗದವರು ಒಂದು ಕಡೆ ತೀವ್ರ ವಾಸ್ತವಕ್ಕೆ ಬಿದ್ದು ವಿದ್ಯೆ, ಹಣದಿಂದ ವಂಚಿತರಾಗಿ ಅನೇಕ ಸಮಸ್ಯೆಗಳಿಂದ ತತ್ತರಿಸುತ್ತಿರುವ ಕೆಳವರ್ಗ ಇನ್ನೊಂದು ಕಡೆ. ಇವು ಈ ದೇಶದ ಎರಡು ಮುಖ್ಯ ಅತಿರೇಖಗಳು. ಇವರ ಮಧ್ಯೆ ಇರುವ ಮಧ್ಯಮವರ್ಗ ಸಂಸ್ಕೃತಿ, ಕಲೆ, ರಾಜಕೀಯ, ರೂಪಣೆಯಲ್ಲಿ ಪ್ರಮುಖ ಪಾತ್ರವಹಿಸುತ್ತದೆ. ಸಂಸ್ಕೃತಿಯನ್ನು ಆದರೆಲ್ಲಾ ಸಂಕೀರ್ಣತೆಯೊಂದಿಗೆ ಬೆಳೆಸುವ ಈ ವರ್ಗ ಲಂಕೇಶರಿಗೆ ಮಹತ್ವದ 'ಸಂಪನ್ನರ ಗುಂಪಾಗಿ' ಕಂಡಿದೆ.

೬. ಅಧಿಕಾರಕ್ಕಾಗಿ ಅಧಿಕಾರ, ಹಣಕ್ಕಾಗಿ –ಹಣ ಇವೇ ನಿಜವಾದ ಜೀವನ ಎಂಬ ನಂಬಿಕೆಯ ರಾಜಕಾರಣಿ ಮತ್ತು ಅವನನ್ನು ಯಾವುದೇ ಪ್ರತಿರೋಧವಿಲ್ಲದೆ ಚುನಾಯಿಸುವ ಮತದಾರ ಪಕ್ಷಾಂತರದ ಪಿಡುಗಿಗೆ ಮೂಲ ಕಾರಣ ಎಂಬುದು ಲಂಕೇಶರ ನಿಲುವು. ವಿರೋಧ ಮತ್ತು ಸ್ವೀಕಾರದ ಸ್ಥಿತಿ ಮಾತ್ರ ಪ್ರಜಾಪ್ರಭುತ್ವ ವ್ಯವಸ್ಥೆಯನ್ನು ಗಟ್ಟಿಗೊಳಿಸುತ್ತದೆ ಎಂಬುದು ಲಂಕೇಶರ ಭಾವನೆ.

೭. ರಾಜಕೀಯದಲ್ಲಿ ಅಧಿಕಾರಕ್ಕಾಗಿ ಒಬ್ಬರಿಗೆ ಬೆಂಬಲ, ಮತ್ತೊಬ್ಬರ ಜೊತೆಯಲ್ಲಿ ಮಾನಸಿಕ ಸಂಧಾನದ ಸ್ಥಿತಿ ಭಾರತೀಯ ರಾಜಕಾರಣದ ನಿತ್ಯದ ರೂಢಿಯಾಗಿದೆ. ಇಂಥ ಸೋಗಲಾಡಿ ರಾಜಕಾರಣ ಲಂಕೇಶರಲ್ಲಿ ತೀವ್ರ ವಿಷಾದವನ್ನು ಮೂಡಿಸುತ್ತದೆ.

೮. ಬಂಡವಾಳಶಾಹಿಗಳ ಅಧೀನದಲ್ಲಿ ಇರುವ ರಾಜಕೀಯ ಅಧಿಕಾರವನ್ನು ಬೇರ್ಪಡಿಸಿ ಅದು ಸಾಮಾನ್ಯನಿಗೂ ಸಿಗುವಂತೆ ಮಾಡಬೇಕು. ಎಂಬುದು ಲಂಕೇಶರ ಅಭಿಪ್ರಾಯ ಗಾಂಧೀ ಕನಸು ಕೂಡ ಇದೇ ಆಗಿತ್ತು ಎಂಬುದು ಅವರ ನಿಲುವು.

೯. ಧರ್ಮ ಎನ್ನುವುದು ಖಾಸಗಿಯಾಗಿರಬೇಕು ಅದು ರಾಜಕಾರಣವನ್ನು ನಿಯಂತ್ರಿಸುವ ಶಕ್ತಿಯಾಗದೆ, ನೈತಿಕ ಸ್ವಾಸ್ಥ್ಯದ ಮೂಲವಾಗಬೇಕು ಎಂಬುದು ಲಂಕೇಶರ ಭಾವನೆ.

## ಅಧ್ಯಾಯ-೩ ರ ಅಡಿಟಿಪ್ಪಣಿಗಳು

೧. ಗೋಪಾಲಕೃಷ್ಣ ಅಡಿಗ, ವಿಫಲ, ಸಂಕಲನ ನಡೆದು ಬಂದ ದಾರಿ, ಸ್ವಪ್ನ ಪ್ರಕಾಶನ, ಬೆಂಗಳೂರು, ೧೯೯೯, ಪು.೧೯೨.

೨. ಗೋಪಾಲಕೃಷ್ಣ ಅಡಿಗ, ಇಂದು ನಮ್ಮೀನಾಡು-೩, ಸಂಕಲನ ನಡೆದು ಬಂದ ದಾರಿ, ಸ್ವಪ್ನ ಪ್ರಕಾಶನ, ಬೆಂಗಳೂರು, ೧೯೯೯, ಪು.೨೨೦.

೩. ಲಂಕೇಶ್, ಪಿ., ಅಕ್ಷರ ರೂಪ ಕಾವ್ಯ ಗಾಂಧೀ ಸ್ಮರಣೆ ಪತ್ರಿಕೆ ಪ್ರಕಾಶನ, ಬೆಂಗಳೂರು, ೧೯೯೩, ಪು.೨೪೮.

೪. ಲಂಕೇಶ್, ಪಿ., ಅಕ್ಷರ ರೂಪ ಕಾವ್ಯ ಗಾಂಧೀ ಸ್ಮರಣೆ ಪತ್ರಿಕೆ ಪ್ರಕಾಶನ, ಬೆಂಗಳೂರು, ೧೯೯೩, ಪು.೨೪೮.

೫. ಗೋಪಾಲಕೃಷ್ಣ ಅಡಿಗ, ಕಟ್ಟುವೆವು ನಾವು, ಸಂಕಲನ ಕಟ್ಟುವೆವು ನಾವು, ಸ್ವಪ್ನ ಪ್ರಕಾಶನ, ೧೯೯೩, ಪು.೬೭.

೬. ಬತ್ರ್ತೂರು-ಭಾರತ.

೭. ಸಂಪಾದಕ ಲಂಕೇಶ್, ಪಿ., ಅಕ್ಷರ ಹೊಸ ಕಾವ್ಯ, ಕುರಿಗಳು ಸಾರ್ ಕುರಿಗಳು ಪತ್ರಿಕೆ ಪ್ರಕಾಶನ, ಬೆಂಗಳೂರು, ೧೯೯೩, ಪು.೧೮೩.

೮. ಲಂಕೇಶ್, ಪಿ., ಟೀಕೆ-ಟಿಪ್ಪಣಿ, ಸಂಪುಟ-೧, ಪತ್ರಿಕೆ ಪ್ರಕಾಶನ, ಬೆಂಗಳೂರು, ೧೯೯೭, ಪು.೬.

೯. ಲಂಕೇಶ್, ಪಿ., ಟೀಕೆ-ಟಿಪ್ಪಣಿ, ಸಂಪುಟ-೧, ಪತ್ರಿಕೆ ಪ್ರಕಾಶನ, ಬೆಂಗಳೂರು, ೧೯೯೭, ಪು.೧೬.

೧೦. ಡಾ. ಸಿದ್ಧಲಿಂಗಯ್ಯ, ಸಾವಿರಾರು ನದಿಗಳು.

ಅಧ್ಯಾಯ : ನಾಲ್ಕು

# ಮೂಲಭೂತವಾದಿಗಳ ಧಾರ್ಮಿಕ ರಾಜಕಾರಣಕ್ಕೆ ಸವಾಲು: ಸಾಂಸ್ಕೃತಿಕ ಬಹುಮುಖತೆಯನ್ನು ನಾಶಮಾಡುವವರ ವಿರುದ್ಧ ತೀವ್ರವಾದ ಕನಲಿಕೆ

೧. ಬಹು ಸಂಸ್ಕೃತಿಯ ನೆಲೆಯ ಗುರುತಿಸುವಿಕೆ.

೨. ಹಿಂದೂ ಧರ್ಮ ಮತ್ತು ಜಾತಿ ಪದ್ಧತಿ.

೩. ಧರ್ಮ ವೈಯಕ್ತಿಕವಾದದ್ದು ಎಂಬ ಗಾಂಧೀ ನಂಬಿಕೆಯ ಬಗ್ಗೆ ಒಲವು.

೪. ಗಾಂಧಿ ರಾಮರಾಜ್ಯವೆಂಬುದು ಮತೀಯವಾದಿಗಳ ಆಡಂಬೋಲವಲ್ಲ.

೫. ಕಮ್ಯುನಿಷ್ಟರು ಕಾಣಲಾಗದ ನಮ್ಮ ಸಾಂಸ್ಕೃತಿಕ ಮಹತ್ವ.

೬. ದೇಶದ ಅಖಂಡತೆಯ ಬಗ್ಗೆ ವಿಚಾರ.

೭. ಭಿನ್ನ ಧರ್ಮೀಯರ ನಡುವೆ ಸಂದೇಹದ ಗೋಡೆ–ಬುದ್ಧಿ ಜೀವಿ ತಾಳ ಬೇಕಾದ ನಿಲುವು.

೮. ರಾಮಜನ್ಮ ಭೂಮಿ ಮತ್ತು ಬಾಬರಿ ಮಸೀದಿ ಕೇವಲ ಮಸೀದಿ ಮತ್ತು ದೇವಾಲಯದ ವಿವಾದ ಅಥವಾ ಪ್ರಶ್ನೆಯಲ್ಲ.

# ಮೂಲಭೂತವಾದಿಗಳ ಧಾರ್ಮಿಕ ರಾಜಕಾರಣಕ್ಕೆ ಸವಾಲು: ಸಾಂಸ್ಕೃತಿಕ ಬಹುಮುಖತೆಯನ್ನು ನಾಶ ಮಾಡುವವರ ವಿರುದ್ಧ ತೀವ್ರವಾದ ಕನಲಿಕೆ

ಭಾರತದ ರಾಜಕೀಯರಂಗ ಜನತಂತ್ರ ವ್ಯವಸ್ಥೆಯಾಗಿರುವಂತೆ, ಗಣತಂತ್ರ ವ್ಯವಸ್ಥೆಯೂ ಹೌದು. ವಿವಿಧತೆಯಲ್ಲಿ ಏಕತೆ ಎಂಬುದು ಈ ದೇಶದ ಪಾರಂಪರಿಕ ನಿಲುವು. ಇಲ್ಲಿ ಒಂದು ಭಾಷೆ ಒಂದು ಧರ್ಮ ಒಂದೇ ರೀತಿಯ ಆಚರಣೆಯನ್ನು ಕಾಣಲು ಸಾಧ್ಯವಿಲ್ಲ. ಕೆಲವು ಭಾವನಾತ್ಮಕ ವಿಚಾರಗಳು ಮಾತ್ರ ಭಾರತೀಯರನ್ನು ಒಂದುಗೂಡಿಸಿವೆ. ಆದರೆ ಆಧುನಿಕ ದಿನಗಳಲ್ಲಿ ಈ ರೀತಿಯ ಬಹುಮುಖ ಸಂಸ್ಕೃತಿಯ ಒಳಗೆ ರಾಜಕೀಯ ಅಧಿಕಾರಕ್ಕೋಸ್ಕರ ಒಡಕನ್ನ ಹುಟ್ಟಿಸುವ ಹುನ್ನಾರಗಳು ನಡೆಯುತ್ತಿವೆ. ಪ್ರತಿಮೆಗಳನ್ನು ವಾಸ್ತವಗಳೆಂದು ನಂಬುವ ಅನ್ಯ ಧರ್ಮೀಯರನ್ನು ಸಂದೇಶಿಸುವ ವಿಶಿಷ್ಟ ಮನೋಭಾವವೊಂದು ಜಾಗೃತವಾಗಿದೆ. ಒಂದು ಸಂಸ್ಕೃತಿ ರೂಪಗೊಳ್ಳಬೇಕಾದರೆ ಹತ್ತು ಹಲವು ಅಂಶಗಳಿಂದ ಅದು ಪಕ್ವವಾಗಬೇಕು. ಈ ದೇಶದಲ್ಲಿರುವ ಹಿಂದೂ, ಮುಸ್ಲಿಂ ಜೈನ ಮತ್ತು ಬೌದ್ಧ ಧರ್ಮಗಳು ಯಾವುವೂ ಕೂಡ ಪೂರ್ಣವಾಗಿಲ್ಲ. ಆದ್ದರಿಂದ ಒಂದು ಮತ್ತೊಂದರಿಂದ ಪ್ರಭಾವಿತವಾಗುತ್ತವೆ. ಆದರೆ ಕೆಲವು ಮೂಲಭೂತವಾದಿಗಳು ತಮ್ಮ ಧರ್ಮವೇ ಶ್ರೇಷ್ಠ ಎನ್ನುವ ನಿಲುವನ್ನು ತಾಳುವುದರಿಂದ ಅನೇಕ ಅಪಾಯಗಳಾಗುತ್ತವೆ. ಎಲ್ಲಾ ಧರ್ಮಗಳು ಸ್ಥಾಪಿತವಾದದ್ದು ಮನುಷ್ಯನ ಉದ್ಧಾರಕ್ಕಾಗಿ, ದಯವೇ ಧರ್ಮದ ಮೂಲ ಎಂಬ ತಿಳುವಳಿಕೆಯೆ ಎಲ್ಲ ಧರ್ಮಗಳ ಮುಖ್ಯ ನೆಲೆ. ಆದರೆ ಇಂದು ಸ್ವಧರ್ಮದ ರಕ್ಷಣೆಯ ಹೆಸರಿನಲ್ಲಿ ಮಾಡುತ್ತಿರುವ ಅನಾಹುತಗಳು ಒಟ್ಟಾರೆ ಭಾರತದ ಅಖಂಡತೆಗೆ ಧಕ್ಕೆ ತರುವ ರೀತಿಯಲ್ಲಿವೆ. ಈ ಹಿನ್ನೆಲೆಯಲ್ಲಿ ಲಂಕೇಶರು ಭಾರತೀಯ ಬಹು ಸಂಸ್ಕೃತಿಯನ್ನು ಗುರುತಿಸುತ್ತಾ ಮೂಲಭೂತವಾದಿ ವಿತರ್ಕಕ್ಕೆ ಗಾಂಧೀಯಂತಹ ಪರ್ಯಾಯವನ್ನು ಸೂಚಿಸುತ್ತಾರೆ. ಈ ರೀತಿಯ ಲೇಖನಗಳನ್ನು ಮುಂದಿನ ಉಪ ಆಶಯಗಳ ಮುಖಾಂತರ ಅಧ್ಯಯನ ಮಾಡಿದ್ದೇನೆ.

೧. ಬಹು ಸಂಸ್ಕೃತಿಯ ನೆಲೆಯ ಗುರುತಿಸುವಿಕೆ.

೨. ಹಿಂದೂ ಧರ್ಮ ಮತ್ತು ಜಾತಿ ಪದ್ಧತಿ.

೩. ಧರ್ಮ ವೈಯಕ್ತಿಕವಾದದ್ದು ಎಂಬ ಗಾಂಧೀ ನಂಬಿಕೆಯ ಬಗ್ಗೆ ಒಲವು.

೪. ಗಾಂಧಿ ರಾಮರಾಜ್ಯವೆಂಬುದು ಮತೀಯವಾದಿಗಳ ಆಡಂಬೋಲವಲ್ಲ.

೫. ಕಮ್ಯುನಿಷ್ಟರು ಕಾಣಲಾಗದ ನಮ್ಮ ಸಾಂಸ್ಕೃತಿಕ ಮಹತ್ವ.

೬. ದೇಶದ ಅಖಂಡತೆಯ ಬಗ್ಗೆ ವಿಚಾರ.

೭. ಭಿನ್ನ ಧರ್ಮೀಯರ ನಡುವೆ ಸಂದೇಹದ ಗೋಡೆ–ಬುದ್ಧಿ ಜೀವಿ ತಾಳ ಬೇಕಾದ ನಿಲುವು.

೮. ರಾಮಜನ್ಮ ಭೂಮಿ ಮತ್ತು ಬಾಬರಿ ಮಸೀದಿ ಕೇವಲ ಮಸೀದಿ ಮತ್ತು ದೇವಾಲಯದ ವಿವಾದ ಅಥವಾ ಪ್ರಶ್ನೆಯಲ್ಲ.

**೧. ಬಹುಂಸಂಸ್ಕೃತಿಯ ನೆಲೆಯ ಗುರುತಿಸುವಿಕೆ**

ಲಂಕೇಶರು ಭಾವಿಸುವಂತೆ ಭಾರತವು ಅನೇಕ ಧರ್ಮಗಳ, ಭಾಷೆಗಳ ಬಹು ಸಂಸ್ಕೃತಿಯ ಪ್ರಾಚೀನ ದೇಶ. ಇಲ್ಲಿರುವ ಪ್ರತಿಯೊಂದು ವಸ್ತುವೂ, ಸಮಾನವಾಗಿ ಎಲ್ಲರಿಗೂ ಸೇರಬೇಕಾಗುರುವುವು. ಭಾರತದ ಐತಿಹಾಸಿಕ ಸ್ಥಳಗಳು, ಜ್ಞಾನ, ನೈಸರ್ಗಿಕ ಸಂಸತ್ತು ಪ್ರತಿಯೊಬ್ಬನ ಮನಸ್ಸಿನಲ್ಲಿ ಸಾಮಾಜಿಕ, ಸಾಂಸ್ಕೃತಿಕ, ಜಾಗೃತಿಯನ್ನು ಉಂಟುಮಾಡುತ್ತವೆ. ಈ ದೇಶದಲ್ಲಿರುವ ಎಲ್ಲಾ ಧರ್ಮೀಯರಲ್ಲಿ 'ಭಾರತ ಮಾತೆ' ಮತ್ತು 'ಗಂಗಾನದಿ' ವೈವಿಧ್ಯಮಯ ನೆನಪು, ಕನಸು, ಹುಟ್ಟಿಸುತ್ತವೆ. ನಾವೆಲ್ಲರೂ ಭಾರತೀಯರು ಎಂಬ ಹೊಣೆಯರಿತ ಹೆಮ್ಮೆಯಲ್ಲಿ ಭಯ, ಆತಂಕ, ಆದರ್ಶಗಳು ತುಂಬಿಕೊಂಡಿರುವುದು ಕುತೂಹಲಕಾರಿಯಾದದ್ದು."[೧] ಆದ್ದರಿಂದ ಈಗ ನಾವು ಭಾರತೀಯತೆಯ ಅಖಂಡತೆಯ ಮಹತ್ವ ಅಗತ್ಯದ ಬಗ್ಗೆ ಸರಿಯಾದ ತಿಳುವಳಿಕೆ ಹೊಂದಬೇಕಾಗಿದೆ.

ಹಿಂದೂವು ಒಬ್ಬ ಒಳ್ಳೆಯ ದೈವಭಕ್ತ ವ್ಯಕ್ತಿಯಾಗಿದ್ದಲ್ಲಿ ಕ್ರೈಸ್ತನು ಅದರಿಂದ ತೃಪ್ತಿ ಪಟ್ಟುಕೊಳ್ಳಬಹುದು. ವ್ಯಕ್ತಿಯೊಬ್ಬನ ನೀತಿ–ನಡೆಗಳು ಯಾವುದೇ ಸಂಬಂಧವಿಲ್ಲದ ವಿಷಯವಾದರೆ ಚರ್ಚು, ಮಸೀದಿ, ದೇವಸ್ಥಾನದಲ್ಲಿ ಒಂದು ನಿರ್ದಿಷ್ಟ ರೀತಿಯಲ್ಲಿ ಮಾಡುವ ಪೂಜಾವಿಧಾನ ಒಂದು ಪೊಳ್ಳು ಕ್ರಮವಾಗುತ್ತದೆ. ವೈಯಕ್ತಿಕ ಅಥವಾ ಸಾಮಾಜಿಕ ಬೆಳವಣಿಗೆಗೆ ಅದು ಅಡ್ಡಿ ಕೂಡ ಆಗಬಹುದು. ಆದ್ದರಿಂದ ಪ್ರತಿಯೊಂದು ಧರ್ಮದಲ್ಲಿಯೂ ಅವರದೇ ಆದ ನಂಬಿಕೆ ನಿಯಮಗಳಿರುತ್ತವೆ. ಎಲ್ಲರೂ ಒಂದಾಗಿ ಅನೇಕತೆಯಲ್ಲಿ ಏಕತೆಯನ್ನು ಸಾದಿಸಿದರೆ ಮಾತ್ರ ನಮ್ಮ ಈ 'ಭವ್ಯ ಭಾರತ' ಉಳಿಯುತ್ತದೆ. ಇಲ್ಲದಿದ್ದರೆ ಮತ್ತೊಬ್ಬರಿಗೆ ಲಾಭವಾಗಿ ಮುಂದೆ ನಾವು ಅವರ ಗುಲಾಮರಾಗಿ ಬದುಕುವಂತಹ ಸ್ಥಿತಿ ನಿರ್ಮಾಣವಾಗುತ್ತದೆ. ಧರ್ಮಗಳ ಸಾಮರಸ್ಯದಿಂದ ಮಾತ್ರ ಒಂದು ದೇಶದ ಉಳಿವು–ವಿಕಾಸ ಅಭಿವೃದ್ಧಿ ಸಾಧ್ಯ ಎಂದು ಲಂಕೇಶರು ಅಭಿಪ್ರಾಯ ಪಟ್ಟಿದ್ದಾರೆ.

ಸಂಸ್ಕೃತಿಯ ಬಹುಮುಖತೆಯ ಕಡೆಗೆ ಎಚ್ಚರವಿದ್ದ ಬೇರೆಯವರ ಆಚರಣೆ ನಂಬಿಕೆಗಳ ಬಗ್ಗೆ ಗೌರವ ಹೊಂದಿದಾಗ ಮಾತ್ರ ಸಾಮರಸ್ಯ ಸಾಧ್ಯವಾಗುತ್ತದೆ. ಈ ಸಾಮರಸ್ಯ ಕೇವಲ ಸಾಮರಸ್ಯವಾದಿಯೊಬ್ಬನ ಬೌದ್ಧಿಕ ಆಸಕ್ತಿಗಾಗಿ ಮಾತ್ರವಲ್ಲ ದೇಶದ ಆರ್ಥಿಕ, ಸಾಮಾಜಿಕ

ರಾಜಕೀಯ ಪ್ರಗತಿಗೂ ಅನಿವಾರ್ಯ ಎಂಬುದು ಲಂಕೇಶರ ನಿಲುವು. ಆಕ್ರಮಣಕಾರಿ ನಿಲುವು ಯಾವುದೇ ಧರ್ಮ ಅಥವಾ ಜನಾಂಗಕ್ಕೆ ಸಲ್ಲುವಂಥದ್ದಲ್ಲ ಎಂಬುದು ಅವರ ಪ್ರಬಲವಾದ ನಂಬಿಕೆ.

**೨. ಹಿಂದೂ ಧರ್ಮ ಮತ್ತು ಜಾತಿ ಪದ್ಧತಿ :**

ಲಂಕೇಶರು ಹಿಂದೂ ಧರ್ಮವನ್ನು ನೋಡುವಾಗ ಸ್ಪಷ್ಟವಾಗಿ ಎರಡು ರೀತಿಯಲ್ಲಿ ಅದನ್ನು ನೋಡುವ ಪ್ರಯತ್ನ ಮಾಡುತ್ತಾರೆ. ವಿಶಾಲ ವ್ಯಾಪ್ತಿಯಲ್ಲಿ ಹೇಳುವುದಾದರೆ ಯಾವುದೇ ಧರ್ಮವನ್ನು ಅವರು ನೋಡುವುದು ಈ ರೀತಿಯಾಗಿಯೇ. ಒಂದು ಧರ್ಮದ ತಾತ್ವಿಕ ಮುಖ. ಎರಡು, ಅದರ ವಾಸ್ತವಿಕ ಮುಖ. ತಾತ್ತ್ವಿಕ ಮುಖದಲ್ಲಿ ಧರ್ಮಗಳು ಸತ್ಯ, ಅಹಿಂಸೆ, ಸಹಿಷ್ಣುತೆಯನ್ನು ಬೋಧಿಸುತ್ತವೆ. ಮಾನವೀಯತೆ ಅದರ ಮೂಲ ನೆಲೆಯಾಗಿರುತ್ತದೆ. ಇತರ ಧರ್ಮಗಳ ಜೊತೆಯಲ್ಲಿ ಶಾಂತಿ, ಸ್ನೇಹದಿಂದ ಇರಲು ಧರ್ಮಗಳು ಬಯಸುತ್ತವೆ. ಇಂತಹ "ಧರ್ಮಗಳು ತಮ್ಮ ಉನ್ನತ ಸ್ಥಿತಿಯಲ್ಲಿ ಹಿಂದೂ ಧರ್ಮದಲ್ಲಾದಂತೆ ರಾಮಾಯಣ, ಮಹಾಭಾರತಗಳಂತಹ ಮಹಾಕಾವ್ಯಗಳ ಹುಟ್ಟಿಗೆ ಕಾರಣವಾಗುತ್ತವೆ."[೨] ಲಂಕೇಶರು ಈ ರೀತಿಯ ಧರ್ಮದ ತಾತ್ತ್ವಿಕ ಆಯಾಮಕ್ಕೆ ಮನ್ನಣೆಯನ್ನು ಕೊಡುತ್ತಾರೆ.

ಆದರೆ ವಾಸ್ತವಿಕ ಮುಖವು ಬೇರೆ ರೀತಿಯದ್ದೇ ಆಗಿದೆ. ಲಂಕೇಶರು ಇದನ್ನು ತಿರಸ್ಕರಿಸುತ್ತಾರೆ. ಧಾರ್ಮಿಕ ಸಮಾಜದಲ್ಲಿ ಜಾತಿ ಎಂಬ ರೋಗ ಹುಟ್ಟಿದಾಗ ವರ್ಣ-ವರ್ಗಗಳೆಂಬ ಗೋಡೆಯನ್ನು ಕಟ್ಟಿದಾಗ, ಪುರೋಹಿತಶಾಹಿಯ ಕುತಂತ್ರಕ್ಕೆ ಸಮಾಜವು ಸಿಕ್ಕಿದಾಗ ಭಾರತೀಯರ ಚೈತನ್ಯ ಶಕ್ತಿ ಕುಗ್ಗಿ ಹೋಗಿದೆ. ಹಿಂದಿನ ರಾಜಪ್ರಭುತ್ವ ಹಾಗೂ ಇಂದಿನ ರಾಜಕೀಯ ಪ್ರಭುತ್ವ ಸಾಮಾನ್ಯರ ನೋವು-ನಲಿವುಗಳಿಗೆ ಸ್ಪಂದಿಸದಿದ್ದಾಗ ಅನೇಕ ಅಪಾಯಗಳಾಗುತ್ತವೆ. ಪ್ರಭುತ್ವವು ಜಾತಿಯ ಹೆಸರಿನಲ್ಲಿ ನಡೆಸುವ ಸ್ವಾರ್ಥ, ನೀಚತನಗಳು ಭಾರತದ ಅಖಂಡತೆ ಒಡೆಯುವ, ವಿಚ್ಛಿದ್ರಕ ಶಕ್ತಿಗಳಾಗುತ್ತವೆ. ಧರ್ಮದ ತಾತ್ತ್ವಿಕ ಮುಖ ಮಹಾಕಾವ್ಯಗಳನ್ನು ಹುಟ್ಟಿಸುವ ಸೃಜನಶೀಲ, ಸಾಧ್ಯತೆಯುಳ್ಳದ್ದು. ಆದ್ದರಿಂದಲೇ ಅದು ಗೌರವಾರ್ಹ. ಅದರ ವಾಸ್ತವಿಕ ಮುಖ ಅಖಂಡತೆಯನ್ನು ಒಡೆಯುವ ಸ್ವರೂಪದ್ದು. ಹಾಗಾಗಿಯೇ ಅದು ಆಕ್ಷೇಪಾರ್ಹ. ಹಿಂದೂ ಧರ್ಮವನ್ನು ಭಿತ್ತಿಯಾಗಿಟ್ಟುಕೊಂಡು ಲಂಕೇಶರು ತಮ್ಮ ಅಭಿಪ್ರಾಯವನ್ನು ಹೇಳಿದರೂ ಎಲ್ಲಾ ಧರ್ಮಗಳ ವಿಚ್ಛಿದ್ರಕಾರಕ ಶಕ್ತಿಯ ಬಗ್ಗೆ ಅವರ ಟೀಕೆ ಇದೆ.

**೩. ಧರ್ಮ ವೈಯಕ್ತಿಕವಾದದ್ದು ಎಂಬ ಗಾಂಧೀ ನಂಬಿಕೆಯ ಬಗ್ಗೆ ಒಲವು :**

ಯಾವುದೇ ಧರ್ಮವು ಉನ್ನತಿ-ಅವನತಿಗಳಿಗೆ ಒಳಗಾಗುತ್ತಲೇ ಮುಂದುವರಿಯುವ ನಿಸರ್ಗ ನಿಯಮಗಳಿಗೆ ಅಧೀನವಾದ ಒಂದು ಜೀವಂತ ಸಂಸ್ಥೆಯಾಗಿರುತ್ತದೆ. ಲಂಕೇಶರು

ಹಿಂದು ಧರ್ಮದ ಬಗ್ಗೆ ಬರೆಯುತ್ತಾ "ಹಿಂದೂ ಧರ್ಮ ಗಂಗೆಯಂತೆ ಮೂಲದಲ್ಲಿ ಶುದ್ಧ ನಿಷ್ಕಲ್ಮಶ ಆದರೆ ಹರಿಯುವಾಗ ದಾರಿಯಲ್ಲಿನ ಕಲ್ಮಶಗಳನ್ನು ಸ್ವೀಕರಿಸುತ್ತದೆ. ಹಿಂದೂ ಧರ್ಮದ ಪರಿಶುದ್ಧತೆಯೇ ಆದರ ಅನುಯಾಯಿಗಳ ಆತ್ಮ ಸಂಯಮವನ್ನು ಅನುಸರಿಸುತ್ತದೆ." ಎನ್ನುತ್ತಾರೆ. ಈ ಆತ್ಮ ಸಂಯಮ ಎನ್ನುವುದು ಧರ್ಮದಿಂದ ನಾವು ಕಲಿಯಬೇಕಾದದು ಅಥವಾ ಧರ್ಮ ನಮಗೆ ಕಲಿಸಬೇಕಾದುದು. ಯಾವುದೇ ಧರ್ಮ ಮೂಲದಲ್ಲಿ ಶುದ್ಧ ನಿಷ್ಕಲ್ಮಶ ಮತ್ತು ಮಾನವೀಯ ಎಂಬುದರಲ್ಲಿ ಅನುಮಾನವೇ ಇಲ್ಲ. ಆದರೆ ಅದು ಬೆಳೆಯುತ್ತಾ ಬಂದಂತೆ ಕಲ್ಮಶಗಳನ್ನು ಕೂಡ ಸ್ವೀಕರಿಸುತ್ತದೆ. ಸ್ವೀಕರಿಸಿದ ಕಲ್ಮಶವನ್ನು ಅನುಯಾಯಿಗಳಿಗೆ ಹೇರುವ ಪ್ರಯತ್ನ ಮಾಡುತ್ತದೆ. ಈ ರೀತಿಯ ಹೇರುವಿಕೆಯ ವಿರುದ್ಧ ಸಹಜವಾದ ಪ್ರತಿರೋಧಗಳು ಎಲ್ಲಾ ಕಾಲಕ್ಕೂ ಇದ್ದದ್ದೇ. ಈ ರೀತಿಯ ಪ್ರತಿರೋಧವನ್ನು ಲಂಕೇಶರು ಕಂಡುಕೊಳ್ಳುವುದು ಗಾಂಧೀ ಮುಖಾಂತರ. "ಆಧ್ಯಾತ್ಮದ ಬಗ್ಗೆ ಮಾತನಾಡುವ ಹಿಂದೂಗಳಾಗಲಿ ಸಮಾನತೆಯನ್ನು ಧರ್ಮವಾಗಿ ಪಡೆದ ಮುಸ್ಲಿಮರಾಗಲಿ ಬ್ರಿಟಿಷರಿಂದ ಅವಮಾನ, ಶೋಷಣೆ, ಶಿಕ್ಷೆಗಳಿಗೆ ಒಳಗಾದದ್ದು ಈಗ ಇತಿಹಾಸ. ಆದರೆ ಈ ವಿಷಯ ಗಾಂಧೀಗೆ ಇತಿಹಾಸವಲ್ಲ ಅದು ಗುಲಾಮಗಿರಿಯಂತಿತ್ತು."[೩] ಆದ್ದರಿಂದಲೇ ಗಾಂಧೀ ಧೈರ್ಯವಾಗಿ ನಾನು ಹಿಂದೂ ಎಂದು ಹೇಳಿಕೊಳ್ಳುತ್ತಿದ್ದರು. ದೇಶದ ಎಲ್ಲಾ ಧರ್ಮೀಯರೂ ಸ್ವಾರ್ಥಿಗಳೆಂದು ಇವರಲ್ಲಿರುವ ಮೂಢನಂಬಿಕೆ, ಅಜ್ಞಾನ ಮತ್ತು ದುರ್ಬಲರು ಆಗಿದ್ದರಿಂದ ಸ್ವತಂತ್ರ್ಯವನ್ನು ಪಡೆಯಲು ಅನರ್ಹರೆಂದು ಗಾಂಧಿ ತಿಳಿದಿದ್ದರು. ಆಗ ಗಾಂಧೀ ಕಾಯಕಕ್ಕೆ ಶ್ರಮಕ್ಕೆ ಪ್ರಾಮುಖ್ಯತೆ ನೀಡಿದರು ಹಾಗೂ ಎಲ್ಲರಿಗೂ ಆತ್ಮಗೌರವವನ್ನು ಕಲಿಸಿದರು. ಎಲ್ಲಾ ಧರ್ಮಗಳ ಮೂಲ ಬೇರಾವ ದಯೆ, ಜವಾಬ್ದಾರಿ ಮುಂತಾದ ಮಾನವೀಯ ಮೌಲ್ಯಗಳನ್ನು ಕಲಿಸಿದರು. ಗಾಂಧೀ ರಾಜ್ಯದಲ್ಲಿ ಧರ್ಮ ವೈಯಕ್ತಿಕವಾಗಿರಬೇಕು. ಜಾತೀಯತೆಗೆ ಜಾಗವಿರಬಾರದು. ಯಾರದೇ ಒತ್ತಾಯ-ಒತ್ತಡದಿಂದ ಒಂದು ಧರ್ಮದ ನೀತಿ-ನಿಯಮವನ್ನು ಒಬ್ಬನ ಮೇಲೆ ಹೇರಬಾರದು. ಧರ್ಮ ಮುಕ್ತವಾಗಿರಬೇಕೆಂದು ಗಾಂಧಿ ಸಾರಿದರು."

ಲಂಕೇಶರ ಈ ಮೇಲಿನ ಮಾತುಗಳು ಧರ್ಮ ಎನ್ನುವುದು ವೈಯಕ್ತಿಕ ಎನ್ನುವ ಗಾಂಧೀ ಮಾದರಿಯನ್ನು ಒಪ್ಪಿ ಅದನ್ನು ಬೆಂಕಿಯಾಗಿಸುವ ಮೂಲಭೂತವಾದಿಗಳಿಗೆ ಪರ್ಯಾಯವಾಗಿ ಮಂಡಿಸುತ್ತಾರೆ.

ಈ ರೀತಿಯ ಪರ್ಯಾಯವನ್ನು ಮಂಡಿಸುವಿಕೆಯು ಬಹುಮುಖಿ ಸಾಂಸ್ಕೃತಿಕ ವಿನ್ಯಾಸವನ್ನು ಗೌರವಿಸುವ ಮನೋಭಾವದಿಂದ ಮೂಡಿದ್ದು. ದೇಶದಲ್ಲಿ ಉಂಟಾಗುತ್ತಿರುವ ಮತೀಯ ಕಲಹಗಳಿಗೆ ಲಂಕೇಶರು ಗಾಂಧೀಯ ಪ್ರತಿಮೆಯನ್ನೇ ಆತ್ಯಂತಿಕ ಪರ್ಯಾಯವಾಗಿ ಮಂಡಿಸುತ್ತಾರೆ. ಮತೀಯ ಕಲಹಗಳಿಗೆ ಕೇವಲ ಜಾತ್ಯಾತೀತ ನೆಲೆಯಲ್ಲಿ ಪರ್ಯಾಯ

ಸಾಧ್ಯವಿಲ್ಲ. ತೀವ್ರವಾದ ಧಾರ್ಮಿಕತೆಯು ಗರ್ಭದಿಂದಲೇ ಮತೀಯ ವಿಷಕ್ಕೆ ಪರ್ಯಾಯ ಸಾಧ್ಯ ಎಂಬ ಅವರ ನಿಲುವು ಗಾಂಧೀಯವನ್ನು ಪ್ರತಿರೋಧವಾಗಿ ಕಂಡುಕೊಂಡಿದೆ. ಆದ್ದರಿಂದಲೇ ಅವರು ಹಿಂದೂ ಧರ್ಮವನ್ನು ಗಾಂಧೀಯಂತೆಯೇ ಪರಿಭಾವಿಸಿ ಮುಂದಿನಂತೆ ಪ್ರತಿಕ್ರಿಯಿಸುತ್ತಾರೆ. ಯಾವ ಧರ್ಮವು ಎಂದಿಗೂ ಯಾರಿಗೂ ಹಿಂಸೆಯನ್ನು ಮಾಡಲಾರದು ಎಲ್ಲ ಧರ್ಮೀಯರನ್ನು ಅದು ಸಮಾನವಾಗಿ ಕಾಣುತ್ತದೆ. ಇತ್ತೀಚಿನ ದಿನಗಳಲ್ಲಿ ಉಂಟಾಗುತ್ತಿರುವ ಹಿಂದೂ ಮುಸ್ಲಿಂರ ನಡುವಿನ ಘರ್ಷಣೆಗಳಿಗೆ ಕಾರಣಗಳು ಎಲ್ಲರೂ ತಾವೇ ಶ್ರೇಷ್ಠ, ತಮ್ಮ ಧರ್ಮವೇ ಶ್ರೇಷ್ಟ ಎಂಬ ಹುಂಬುತನದಲ್ಲಿ ಎಲ್ಲ ಧರ್ಮೀಯರು ಬೇರೆಯವರನ್ನು ಶೋಷಣೆಗೆ ಗುರಿಮಾಡುತ್ತಿದ್ದಾರೆ. ಭಾರತ ಭಾವೈಕ್ಯತೆಯ ನಾಡು ಇಲ್ಲಿ ಯಾವುದೇ ತೊಂದರೆಯಾದರೂ ಎಲ್ಲರೂ ಭಾಗಿಗಳಾಗಬೇಕು. ಎಲ್ಲವನ್ನು ಸಮಾನವಾಗಿ ಹಂಚಿಕೊಂಡಾಗ ಮಾತ್ರ ಭಾರತೀಯತೆ ಅಥವಾ ಅಖಂಡತೆಯ ಉಳಿವನ್ನು ಕಾಣಬಹುದು''ಲಂಕೇಶರು ಸಮಕಾಲೀನ ಇಂಥ ಘಟನೆಗಳಿಗೆ ಗಾಂಧೀ ಪ್ರತಿಮೆಯ ಮೂಲಕ ಪರಿಹಾರವನ್ನು ಕಂಡುಕೊಳ್ಳಲು ಪ್ರಯತ್ನಿಸಿದ್ದಾರೆ.

**೪. ಗಾಂಧೀ ರಾಮರಾಜ್ಯವೆಂಬುದು ಮತೀಯವಾದಿಗಳ ಆಡುಂಬೋಲವಲ್ಲ :**

ರಾಮರಾಜ್ಯ ಎಂಬ ಕಲ್ಪನೆಯನ್ನು ಹಿಂದೂವಾದಿಗಳು ಪ್ರತಿಪಾದಿಸುತ್ತಾರೆ. ಗಾಂಧೀ ಕೂಡ ರಾಮರಾಜ್ಯದ ಪ್ರತಿಪಾದಕರಾಗಿದ್ದರು. ಅಷ್ಟೇ ಅಲ್ಲಾ ತನ್ನನ್ನು ತಾನು ಸನಾತನಿ ಎಂದು ಕರೆದುಕೊಳ್ಳುತ್ತಿದ್ದರು. ಹಿಂದೂವಾದಿಗಳ ಕ್ಷಾತ್ರತೇಜದ ರಾಮರಾಜ್ಯದ 'ಪರ-ಧರ್ಮ ಭಯಾವಹ' ಎನ್ನುವ ನಂಬಿಕೆಗಿಂತ ಗಾಂಧೀಯ ರಾಮರಾಜ್ಯದ ಕಲ್ಪನೆ ಬೇರೆಯದು.

ಗಾಂಧೀ ಈ ನಾಡಿನ ಜನತೆಗೆ ತಮ್ಮನ್ನು ತಾವು ಕಾಪಾಡಿಕೊಳ್ಳಲು, ಹಾಗೂ ಅಭಿವೃದ್ಧಿಯನ್ನು ಹೊಂದಿ ಸ್ವಾವಲಂಬಿಗಳಾಗಲು ಅಹಿಂಸೆ, ಸತ್ಯ, ಪ್ರಾಮಾಣಿಕತೆ ಮತ್ತು ಕಾಯಕ ಎಂಬ ಕೆಲವು ತತ್ವಗಳನ್ನು ಮನವರಿಕೆ ಮಾಡಿದರು. ನಾನು ಎಲ್ಲಾ ಧರ್ಮೀಯರನ್ನು ಸಮಾನವಾಗಿ ಕಾಣುತ್ತೇನೆ. ಅದಕ್ಕೆ ನಾನು ಹಿಂದೂ ಎಂದು ಎಲ್ಲರೆದುರು ಮುಕ್ತವಾಗಿ ಹೇಳಿಕೊಂಡರು. ಪ್ರತಿಯೊಬ್ಬನ ಧರ್ಮವು ಬಂಧನವಾಗಿರಬಾರದು, ಬಿಡುಗಡೆಯ ಹೆದ್ದಾರಿಯಾಗಬೇಕೆಂದು ಸಾರಿದರು. ವ್ಯಕ್ತಿ ಸ್ವಾತಂತ್ರ್ಯಕ್ಕೆ ಮಹತ್ವವನ್ನು ನೀಡಿದರು. ಮೊದಲು ಹಳ್ಳಿಗಳ ಅಭಿವೃದ್ಧಿ ಉಂಟಾದರೆ ಮಾತ್ರ ದೇಶ ಸ್ವಾವಲಂಬಿಯಾಗಲು ಸಾಧ್ಯ ಎಂದು ಎಲ್ಲರಿಗೂ ಎಚ್ಚರಿಕೆಯನ್ನು ಮೂಡಿಸಿದರು.

ಈ ನಾಡಿನ ಪ್ರತಿಯೊಬ್ಬನೂ ಕ್ರಿಯಾಶೀಲತೆಯಿಂದ ತನ್ನ ಕರ್ತವ್ಯ ನಿರ್ವಹಿಸುವುದು ಈ ನಾಡಿನ ಪ್ರಗತಿಗೆ ಕೊಡುಗೆಯನ್ನು ಕೊಟ್ಟಂತೆ. ಇಲ್ಲಿ ಎಲ್ಲರೂ ಮುಖ್ಯರು ಯಾರೂ ಅಮುಖ್ಯರಲ್ಲ ಎಂದು ಜನತೆಯಲ್ಲಿ ಜಾಗೃತಿಯನ್ನು ಉಂಟು ಮಾಡಿ ನಾಡಿನ ಸರ್ವತೊಮುಖ

ಅಭಿವೃದ್ಧಿಗೆ ಶ್ರಮಿಸಿ, ಸಾಂಸ್ಕೃತಿಕವಾಗಿ ವೈವಿಧ್ಯತೆಯನ್ನು ಉಂಟುಮಾಡಿದ ರಾಮರಾಜ್ಯದ ಕನಸನ್ನು ಕಂಡ 'ಭವ್ಯ ಭಾರತದ' ನವ ಶಿಲ್ಪಿ ಗಾಂಧೀ ನಮ್ಮಂತೆ ಮನುಷ್ಯರಾಗಿ ಹುಟ್ಟಿ ಮನುಷ್ಯರ ಮಧ್ಯ ಬೆಳೆದ ಅಸಮಾನ್ಯ ವ್ಯಕ್ತಿ, ಎಂದೂ ದೇವಾಲಯಗಳಿಗೆ ಹೋಗಲಿಲ್ಲ. ಅರ್ಚಕರಿಗೆ ಗೌರವ ನೀಡುತ್ತಿರಲಿಲ್ಲ. ಎಲ್ಲಾ ರೀತಿಯ ಮೂಢನಂಬಿಕೆಯಿಂದ ಹೊರ ಬಂದವರು ಅವೆಲ್ಲವನ್ನು ತನ್ನ ತಿಳುವಳಿಕೆಯಿಂದ ಸ್ಫೋಟಿಸಿದರು."[೪] ಅವರು ಎಂದೂ ಹಿಂದೂತ್ವವನ್ನು ಪ್ರದರ್ಶಿಸಲು ಬಯಸಿದವರಲ್ಲ. ಎಲ್ಲಾ ಧರ್ಮಗಳಿರುವ ಸರಳತೆ, ಮಾನವೀಯತೆ, ದಯೆ ಇವುಗಳನ್ನು ಮಾತ್ರ ಒಪ್ಪುತ್ತಿದ್ದರು. ಗಾಂಧಿ ರೂಪಿಸಿದ ಸರಳ, ಜಾತ್ಯಾತೀತ ರಾಮರಾಜ್ಯದಲ್ಲಿ ಯಾರದೇ ಸರ್ವಾಧಿಕಾರವಿರಬಾರದೆಂದು ಪ್ರತಿಪಾದಿಸಿದರು.

ಯಾವುದೇ ರೀತಿಯ ಸರ್ವಾಧಿಕಾರತ್ವವಿಲ್ಲದ, ಧರ್ಮ ಎನ್ನುವುದು ವೈಯಕ್ತಿಕವಾಗಿರುವ ಕಾರ್ಯಶೀಲ, ವ್ಯಕ್ತಿಗೌರವವಿರುವ, ಸಮಾನತೆಯ ಸುಖಿ ಸಮಾಜವನ್ನೇ ಗಾಂಧೀ ರಾಮರಾಜ್ಯ ಎಂದು ಕರೆದುಕೊಂಡಿದ್ದು. ಇದು ಯಾವುದೇ ಕಾರಣಕ್ಕೂ ಹಿಂದೂತ್ವವಾದಿಗಳ 'ರಾಮರಾಜ್ಯ' ಎಂಬ ಕ್ಷಾತ್ರ ಕಲ್ಪನೆಗೆ ಹೊಂದಿಕೊಳ್ಳುವುದಿಲ್ಲ. ಗಾಂಧಿ ರಾಮರಾಜ್ಯವೆಂಬುದು ಮತೀಯವಾದಿಗಳ ಆಡುಂಬೋಲವಲ್ಲ ಅದಕ್ಕಾಗಿಯೇ ಲಂಕೇಶರು ಗಾಂಧೀಯ ರಾಮರಾಜ್ಯದ ಕಲ್ಪನೆಯನ್ನು ಭಾರತದ ಕಟ್ಟುವಿಕೆಗೆ ಅನಿವಾರ್ಯ ಮಾರ್ಗ ಎಂಬ ನೆಲೆಯಲ್ಲಿ ಮಂಡಿಸುತ್ತಾರೆ.

**೫. ಕಮ್ಯುನಿಷ್ಟರು ಕಾಣಲಾಗದ ನಮ್ಮ ಸಾಂಸ್ಕೃತಿಕ ಮಹತ್ವ :**

ಭಾರತ ಹಳ್ಳಿಗಳ ದೇಶ. ಈ ಎಲ್ಲಾ ಹಳ್ಳಿಗಳ ಕೇಂದ್ರ ಶಕ್ತಿ. ಆ ಹಳ್ಳಿರುವ ಒಂದು ಗ್ರಾಮ ದೇವರಾಗಿರುತ್ತದೆ. ಹಳ್ಳಿಯ ಎಲ್ಲರೂ ಈ ಸ್ಥಳದಲ್ಲಿ ತಮ್ಮ ಕಷ್ಟ-ಸುಖಗಳನ್ನು ಹಂಚಿಕೊಂಡು ನೆಮ್ಮದಿಯಿಂದ ಬದುಕಲು ಬಯಸುತ್ತಾರೆ. "ಇಂಥ ಸ್ಥಳಗಳು ಸಾರ್ವಜನಿಕವಾದವುಗಳು. ಈ ದೇವಾಲಯಗಳು ಜ್ಞಾನ, ಭಕ್ತಿ ಮತ್ತು ಶಾಂತಿಯ ಕೇಂದ್ರವಾಗಿರದೆ ಅವರ ಬದುಕಿನ ಒಂದು ಭಾಗವಾಗಿವೆ. ಇಲ್ಲಿ ಎಲ್ಲರೂ ಸೇರಿ ತಮ್ಮ ತಮ್ಮ ಅನುಭವಗಳನ್ನು ಕಷ್ಟ-ಸುಖಗಳನ್ನು ಹಂಚಿಕೊಳ್ಳುತ್ತಾರೆ."[೫]

ನಮ್ಮ ಕಮ್ಯುನಿಷ್ಟರು, ಸೋಷಲಿಸ್ಟರೆಲ್ಲ ನಾಶವಾದದ್ದು ಅವರಲ್ಲಿರುವ ಮೂಲಭೂತ ತಾತ್ಸಾರ ಮತ್ತು ಸಿನಿಕತನದ ಮೂಲಕ. ದೇವಾಲಯ, ಪೂಜಾರಿಗಳೆಲ್ಲ ಜನರ ಶೋಷಣೆಯ ಕೇಂದ್ರಗಳು ಅದನ್ನು ನಾಶಮಾಡಬೇಕೆಂಬುದು ಕಮ್ಯುನಿಷ್ಟರ ಅಭಿಪ್ರಾಯ. ಆದರೆ ದೇವಾಲಯದ ಕಟ್ಟಡಗಳು ನಮ್ಮ ಸಂಸ್ಕೃತಿ ಮತ್ತು ವಾಸ್ತುಶಿಲ್ಪವನ್ನು ಸಂಕೇತಿಸುತ್ತವೆ. ಜನರಲ್ಲಿ ದೇವರ ಅಮೂರ್ತ ಶಕ್ತಿಯ ಬಗ್ಗೆ ಒಂದು ಅಪಾರವಾದ ನಂಬಿಕೆ ಭಯವಿದೆ. ದೇವಾಲಯದ ನಾಶವೆಂದರೆ ಜನರ ಮನಸ್ಸಿನಲ್ಲಿ ಶಾಶ್ವತವಾಗಿ ನೆಲೆಸಿರುವ ತತ್ವಕ್ಕೆ ದ್ರೋಹ ಬಗೆದಂತೆ.

ಎಂ.ಎನ್. ರಾಯ್ ಎಂಬ ಖ್ಯಾತ ಕಮ್ಯುನಿಷ್ಟನನ್ನು ಲೆನಿನ್ ಭಾರತಕ್ಕೆ ಕಳಿಸಿದ ಇಲ್ಲಿನ ಸ್ವಾತಂತ್ರ್ಯ ಚಳುವಳಿಯ ವರದಿಗಾಗಿ. ಭಾರತದಲ್ಲಿ ಸ್ವಾತಂತ್ರ್ಯ ಚಳುವಳಿಯನ್ನು ದೇವಸ್ಥಾನಗಳಲ್ಲಿ ಹರಿಕಥೆಗಳ ಮೂಲಕ ಕೂಡ ನಡೆಸುತ್ತಿದ್ದಾರೆ. ಆದ್ದರಿಂದ ಅದು ಕಂದಾಚಾರಿ ಚಳುವಳಿ ಎಂದು ರಾಯ್ ವರದಿ ಮಾಡಿದರು. ಇದನ್ನು ಕೇಳಿದ ಲೆನಿನ್ "ಯಾವುದೇ ಚಳುವಳಿಗೆ ಜನರಲ್ಲಿರುವ ಎಲ್ಲ ಜನಪ್ರಿಯ ಪ್ರಕಾರಗಳನ್ನು ಬಳಸಿಕೊಳ್ಳಬೇಕು. ಈಗ ಭಾರತದಲ್ಲಿ ನಡೆಯುತ್ತಿರುವುದು ಸರಿ ಎಂಬ ನಿಲುವನ್ನು ವ್ಯಕ್ತಪಡಿಸಿದರು."[೬] ಭಾರತೀಯನೆ ಆದ ಎಂ.ಎನ್. ರಾಯ್‌ಗೆ ಹೊಳೆಯದ ಸಂಸ್ಕೃತಿಯ ವಿದ್ರೋಹಿ ನಾವೀನ್ಯತೆ ಹೊಳೆಯುವುದು ಲೆನಿನ್‌ಗೆ.

ಭಾರತೀಯರು ಹರಿಕಥೆ ಮೂಲಕ ದೇವರನ್ನು ಕಾಣುತ್ತಿದ್ದಾರೆ. ಆದ್ದರಿಂದ ಸ್ವಾತಂತ್ರ್ಯ ಚಳುವಳಿಯಂತಹ ಗಂಭೀರ ವಿಷಯವನ್ನು ಜನಪ್ರಿಯ ರೂಪಕಗಳ ಮೂಲಕ ತಿಳಿಸುವುದು ಜಾಗೃತಿಯನ್ನು, ಅರಿವನ್ನು ಮೂಡಿಸುತ್ತಿರುವುದು ಸರಿಯಾದ ಕ್ರಮ. ಈ ರೀತಿ ತಾತ್ವಿಕ ತಿಳುವಳಿಕೆಯು ನಮ್ಮ ಕಮ್ಯುನಿಷ್ಟರಿಗೆ ಸಾಧ್ಯವಾಗದಿರುವುದು ಲಂಕೇಶರಿಗೆ ದುರಂತವಾಗಿ ಕಾಣುತ್ತದೆ. ದೇವಾಲಯ ಭಕ್ತಿ ಕೇಂದ್ರವಾಗಿರುವಂತೆ ಸಮುದಾಯ ಕೇಂದ್ರವೂ ಆಗಿರುತ್ತದೆ. ಒಂದು ಸಂಸ್ಕೃತಿಯ ಸತ್ಯ ವಿಕಾಸಗೊಳ್ಳಬೇಕಾದರೆ ದೇವಾಲಯಗಳು ಪ್ರಧಾನ ಶಕ್ತಿಗಳಾಗಿ ಕೆಲಸ ನಿರ್ವಹಿಸುತ್ತಿವೆ. ಇದನ್ನು ಅರ್ಥಮಾಡಿಕೊಳ್ಳದೆ ಹೋದರೆ ಯಾವುದೇ ಚಳುವಳಿ ತನ್ನ ಗುರಿಯನ್ನು ತಲುಪಲಾರದು ಸಂಸ್ಕೃತಿಯ ಅಂತಃಸತ್ವವನ್ನು ಅರಿಯದೆ ಹೋದರೆ ನಾವೀನ್ಯತೆ ಬಹಳ ಕಾಲ ಉಳಿಯಲಾರದು ಎಂಬುದು ಲಂಕೇಶರು ನಿಲುವು.

**೬. ದೇಶದ ಅಖಂಡತೆಯ ಬಗ್ಗೆ ವಿಚಾರ :**

ಈ ದೇಶ ಶತಮಾನಗಳ ಕಾಲ ಪರಾಧೀನಕ್ಕೆ ಒಳಗಾಗಿತ್ತು. ಈ ರೀತಿಯ ಆಕ್ರಮಣಕ್ಕೆ ಕಾರಣಗಳು ಧರ್ಮಾಂಧತೆಯಿಂದ ಈ ದೇಶ ವಿಚ್ಛಿದ್ರವಾಗಿದ್ದು, ಮೂಢನಂಬಿಕೆ, ಅನೈತಿಕತೆ ಮುಂತಾದವುಗಳು. ಈ ರೀತಿಯ ಸ್ಥಿತಿಗಳು ಇಂದಾದರೂ ಮರೆಯಾಗಿವೆಯೇ? ಎಂದು ಪ್ರಶ್ನಿಸಿದರೆ ಉತ್ತರ ನಿರಾಶದಾಯಕವಾದದ್ದು. ವಿಚ್ಛಿದ್ರಕಾರಿ ಶಕ್ತಿಗಳು ಇಂದಿಗೂ ಧರ್ಮ-ದೇವರುಗಳ ಹೆಸರಿನಲ್ಲಿ ದೇಶವನ್ನು ಒಡೆಯುವ ಹುನ್ನಾರ ನಡೆಸುತ್ತಿವೆ. ಈ ಕಾರಣದಿಂದ ಜಾತ್ಯಾತೀತ ನ್ಯಾಯದಲ್ಲಿ ನಂಬಿಕೆ ಇರುವವರೆಲ್ಲ ಒಂದುಗೂಡಬೇಕು ಎಂಬುದು ಲಂಕೇಶ ಅಕಾಂಕ್ಷೆ ಅವರ ಪ್ರಕಾರ "ಬಾಬರಿ ಮಸೀದಿ ರಾಮಜನ್ಮ ಭೂಮಿಯ ಬಗ್ಗೆ ವಿವಾದ ಹುಟ್ಟಿಸುವ ಮತಾಂಧ ಜನಕ್ಕೆ ಸರಳ ವ್ಯವಹಾರ ಜ್ಞಾನವಿಲ್ಲ. ಇಲ್ಲಿನ "ರಾಮಾಯಣ, ಮಹಾಭಾರತ ಕೇವಲ ಇತಿಹಾಸವಲ್ಲ. ಅವು ದೇಶದ ಎಲ್ಲಾ ಜಾತಿಗಳ ಮಹಾಕಾವ್ಯಗಳು."[೭] ಆದ್ದರಿಂದ ಬಾಬರಿ ಮಸೀದಿ ಜಾಗದಲ್ಲಿ ಹಿಂದೆ ರಾಮಮಂದಿರ ಇತ್ತೆಂದು ಆ ಮಸೀದಿಯನ್ನು ಕೆಡವಲು ಯತ್ನಿಸಿದರೆ

ಶಂಕರಾಚಾರ್ಯರು ಈ ದೇಶದ ಉದ್ದಗಲಕ್ಕೆ ಮಠ-ಮಂದಿರಗಳನ್ನು ಬೀಳಿಸಿ ವೈಷ್ಣವರ ದೇವಾಲಯಗಳನ್ನು ಕಟ್ಟಿಸಿದ್ದನ್ನು ಸರಿಪಡಿಸಬೇಕಾಗುತ್ತದೆ.

ಇಂಥ ಸರಿಪಡಿಸುವಿಕೆ ಒಂದು ರೀತಿಯಲ್ಲಿ ಇತಿಹಾಸಕ್ಕೆ ಬಗೆಯುವ ದ್ರೋಹ ಇತಿಹಾಸದ ಘಟನೆಗಳ ಬಗ್ಗೆ ಕೆದಕಿ ಹಿಂದಿನ ಸತ್ಯಕ್ಕೆ ಅಪಚಾರ ಬಗೆಯುವುದು ಗಾಂಧೀಯ ಬಾಲ್ಯವನ್ನು ಕೆದಕಿದಂತಾಗುತ್ತದೆ. ಈ ಕೆಲಸಗಳು ದೇಶದ ಅಖಂಡತೆಗೆ ಧಕ್ಕೆಯನ್ನುಂಟು ಮಾಡುತ್ತವೆ.

ಇನ್ನೊಂದು ರೀತಿಯಲ್ಲಿ ರಾಮ, ಕೃಷ್ಣ, ಮತ್ತು ಶಿವ ಮುಂತಾದವರು ಪುರಾಣದ ಪ್ರತಿಮೆಗಳಾಗಿ ಭಾರತೀಯ ಜನ ಜೀವನವನ್ನು ಶಾಶ್ವತವಾಗಿ ನೆಲೆಸಿದ್ದಾರೆ. ರಾಮ ಎನ್ನುವವನು ಒಂದು ಪ್ರತಿಮಾ ಸತ್ಯ, ಐತಿಹಾಸಿಕ ಸತ್ಯವಲ್ಲ. ಈ ಪ್ರತಿಮಾ ಸತ್ಯವನ್ನು ವಾಸ್ತವವೆಂದು ಭಾವಿಸಿ ಧರ್ಮ-ಧರ್ಮಗಳ ನಡುವೆ ಕಲಹ ಉಂಟುಮಾಡುವುದು ದೇಶದ ಸಮಗ್ರತೆಗೆ ಧಕ್ಕೆ ತರುತ್ತದೆ.

ಈ ದೇಶದ ಸಮಗ್ರತೆ ಉಳಿಯಬೇಕಾದರೆ ಧರ್ಮ ಎನ್ನುವುದು ವೈಯಕ್ತಿಕವಾಗಬೇಕು. ಇದನ್ನೇ ಲಂಕೇಶರು "ಭಾರತ ಹಲವು ಜಾತಿ ಧರ್ಮಗಳ ವೈವಿಧ್ಯಮಯ ಸಂಸ್ಕೃತಿಯು ಮತ್ತು ಚರಿತ್ರೆಯುಳ್ಳ ದೇಶ. ಇಲ್ಲಿ ನಾವೆಲ್ಲ ಬದುಕಬೇಕಾದದ್ದು ಜಾತಿಯನ್ನು ಸಾರ್ವಜನಿಕ ಬದುಕಿಗೆ ತರಲು ನಿರಾಕರಿಸಿ. ಎಲ್ಲಾ ಧರ್ಮಗಳಲ್ಲಿರುವ ದಯೆ, ದಾಕ್ಷಿಣ್ಯವನ್ನು ಅರಿತುಕೊಂಡು ಭಾರತದ ಅಖಂಡತೆಯನ್ನು ಉಳಿಸಿ ಬೆಳೆಸುವುದು ಎಲ್ಲರ ಜವಾಬ್ದಾರಿ" ಎಂಬುದು ಲಂಕೇಶರ ಅಭಿಪ್ರಾಯ.

**೭. ಭಿನ್ನ ಧರ್ಮೀಯರ ನಡುವೆ ಸಂದೇಹದ ಗೋಡೆ-ಬುದ್ಧಿ ಜೀವಿ ತಾಳಬೇಕಾದ ನಿಲುವು:**

ಒಂದು ಕಾಲಕ್ಕೆ ಎಡಪಂಥೀಯರು, ಬಲ ಪಂಥೀಯರು ಸಂಪ್ರದಾಯವಾದಿಗಳು, ಉದಾರವಾದಿಗಳು ಒಬ್ಬರೊಂದಿಗೆ ಒಬ್ಬರು ಹೋರಾಡುತ್ತಿದ್ದರು. ಆದರೆ ಇಂದಿನ ಸಂದರ್ಭದಲ್ಲಿ ಈ ರೀತಿಯ ಸಂಘರ್ಷಗಳು ಇಲ್ಲವಾಗಿ ಜಾತಿವಾದಿ ಮತ್ತು ಜಾತ್ಯಾತೀತ ಶಕ್ತಿಗಳ ನಡುವೆ ಮಾತ್ರ ಸಂಘರ್ಷ ಏರ್ಪಡುತ್ತಿವೆ. ಇಂಥಹ ದ್ವಿಧ್ರುವ ಸಂಘರ್ಷದ ವೇಳೆಯಲ್ಲಿ ಬುದ್ಧಿ ಜೀವಿಯೊಬ್ಬನು ಕೇಳಿಕೊಳ್ಳಬೇಕಾದ ಮುಖ್ಯ ಪ್ರಶ್ನೆಯೆಂದರೆ ಜಾತಿಗಳ ಘರ್ಷಣೆ ಏರ್ಪಡದಂತೆ ಇರಬೇಕಾದರೆ ಯಾವ ರೀತಿಯ ಸುಧಾರಣೆ ಮಾಡಬೇಕು ಎಂಬುದಾಗಿದೆ. ಬೌದ್ಧಿಕ ವಲಯದಲ್ಲಿಯೂ ಕೂಡ ಇಂದು ಈ ರೀತಿಯ ದ್ವಿಧ್ರುವ ಸಿದ್ಧಾಂತಗಳ ಆಳ್ವಿಕೆಯೇ ಇದೆ. ಒಬ್ಬ ವಿದ್ವಾಂಸ ನಡೆಸುವ ಅಧ್ಯಯನಗಳು ಅವನ ವ್ಯಕ್ತಿತ್ವದ ಶೋಧನೆಯಾಗದೆ, ಕೇವಲ ಪಾಂಡಿತ್ಯ ಪ್ರದರ್ಶನದ ಗುಣವೇ ಎದ್ದು ಕಾಣುತ್ತದೆ. ಲಂಕೇಶರು ಇದನ್ನು ವಿಷಾದದಿಂದ "ಕನ್ನಡ ಸಂಸ್ಕೃತಿಯ ಬಗ್ಗೆ ಬರೆದ ಒಬ್ಬ ಆರ್.ಎಸ್.ಎಸ್. ಬುದ್ಧಿಯ ಪಂಡಿತನಿಗೆ ಕನ್ನಡ ಸಾಹಿತ್ಯಕ್ಕೆ

ಮುಸ್ಲಿಮರು, ಕ್ರಿಶ್ಚಿಯನ್ನರು ನೀಡಿದ ಅರ್ಥವತ್ತಾದ ಕೃತಿಗಳೂ ಕೂಡ ನೆನಪಿರುವುದಿಲ್ಲ. ಹಾಗೆಯೇ ಶಿಶುನಾಳ ಶರೀಫರ ಹಾಡುಗಳನ್ನು ಸಂಪಾದಿಸಿ ಹಣ ಮಾಡಿದ ಪಂಡಿತರು ಆರ್.ಎಸ್.ಎಸ್. ಗುಂಪಿನಲ್ಲಿದ್ದಾರೆ."[೮] ಹಿಂದೂಗಳನ್ನು ಕುರಿತು ಕುರುಡು ಭಾವುಕತೆಯಿಂದ ಮಾತನಾಡುವ ಅದೇ ರೀತಿ ವರ್ತಿಸುವ ಹಿಂದೂಗಳು, ಹಿಂದೂ ಮುಸ್ಲಿಂ ಸಂಬಂಧ ಬಲಪಡಿಸುವುದಿಲ್ಲ. ಜಗತ್ತಿನಲ್ಲಿಯೇ ಎರಡನೇ ಸ್ಥಾನದ ಮುಸ್ಲಿಮರು ಭಾರತಲ್ಲಿದ್ದಾರೆ. ಅರಬ್ ದೇಶದಲ್ಲಿರುವ ಮುಸ್ಲಿಮರು ಭಾರತದ ಹಿಂದೂಗಳನ್ನು ಹೋಲುತ್ತಿದ್ದಾರೆ. ನಮ್ಮಲ್ಲಿರುವ ಧರ್ಮ ಆಚರಣೆಗಳು ಇನ್ನೊಬ್ಬರನ್ನು ಪ್ರಭಾವಿಸಿವೆ. ಹಿಂದೂಗಳಿಗೊಂದು ಚರಿತ್ರೆ ಇರುವಂತೆಯೇ ಮುಸ್ಲಿಮರಿಗೂ ಇದೆ. ಆದ್ದರಿಂದ ಚರಿತ್ರೆಯನ್ನು ಚರಿತ್ರೆಯಾಗಿ ಮಾತ್ರ ಇಂದು ಅಭ್ಯಸಿಸಬೇಕಾಗಿದೆ. ಚರಿತ್ರೆಯಿಂದ ಆಕ್ರಮಣ, ಹಿಂಸೆಗಳನ್ನು ಪಡೆಯತೊಡಗಿದ ಜನ ವರ್ತಮಾನದಲ್ಲಿ ನಶಿಸಿ ಹೋಗುತ್ತಾರೆ. ಜಾತಿ ಒಳಜಾತಿಗಳನ್ನು ನಂಬಿದ ದೇಶಗಳು ವಿನಾಶದ ಅಂಚಿನಲ್ಲಿವೆ. ಜಾತಿ ಧರ್ಮಗಳನ್ನೆಲ್ಲಾ ಖಾಸಗಿಯಾಗಿಟ್ಟುಕೊಂಡು ದೇಶಗಳೆಲ್ಲಾ ಆರ್ಥಿಕವಾಗಿ ನೆಮ್ಮದಿಯಿಂದ ತುಂಬಿವೆ ಎಂದು ಲಂಕೇಶರು ಅಭಿಪ್ರಾಯ ಪಡುತ್ತಾರೆ. ಇಂತಹ ವಾತಾವರಣದಲ್ಲಿ ಬುದ್ಧಿ ಜೀವಿಯಾದವನು ಜಾತ್ಯಾತೀತ ನಿಲುವಿನಲ್ಲಿ ನಿಂತು ಜಾತಿ ಅತಿರೇಖವನ್ನು ಹೇಳುವ ಬೌದ್ಧಿಕ ವಿಕೃತಿಯನ್ನು ಕಂಡುಹಿಡಿಯಬೇಕಾಗಿದೆ. "ಎದುರಾಳಿಗಳು ತಪ್ಪುಮಾಡಿದಾಗ ನಾವು ತಪ್ಪು ಮಾಡುವುದು ಸರಿಯಾದುದಲ್ಲ. ಎರಡು ತಪ್ಪುಗಳು ಸೇರಿ ಒಂದು ಸರಿ ಆಗುವುದಿಲ್ಲ ಎಂಬ ಗಾಂಧಿ ನಿಲುವು ಇಂದು ನಮ್ಮ ಬುದ್ಧಿ ಜೀವಿಗಳಲ್ಲಿ ಮೂಡಬೇಕಾಗಿದೆ."[೯] ಜಾತೀಯತೆಯಿಂದಾಗಿ ಅಶಾಂತವಾಗಿರುವ ಪರಿಸರವನ್ನು ಸಹಜ ಸ್ಥಿತಿಗೆ ತರುವುದು ಬುದ್ಧಿ ಜೀವಿಗಳ ಕರ್ತವ್ಯ ಎಂದು ಲಂಕೇಶರು ಭಾವಿಸುತ್ತಾರೆ.

**೮. ರಾಮಜನ್ಮಭೂಮಿ ಮತ್ತು ಬಾಬರಿ ಮಸೀದಿ ಕೇವಲ ಮಸೀದಿ ಮತ್ತು ದೇವಾಲಯದ ವಿವಾದ ಅಥವಾ ಪ್ರಶ್ನೆಯಲ್ಲ:**

ಈ ವಿವಾದಕ್ಕೆ ಸಂಬಂಧಿಸಿದಂತೆ ಲಂಕೇಶರು ಪ್ರತಿಕ್ರಿಯಿಸುತ್ತಾ "ಇದು ದೇವಾಲಯ ಮಸೀದಿ ಪ್ರಶ್ನೆಯಲ್ಲ. ಒಂದು ಜನತೆಯ ಆತ್ಮಗೌರವದ, ಸಹಬಾಳ್ವೆಯ ಪ್ರಶ್ನೆ. ಈ ಸಮಸ್ಯೆಯನ್ನು ಸರಳೀಕರಿಸಿದರೆ ಅನ್ಯಾಯವನ್ನು ಸಹಿಸಿದರೆ ಇಲ್ಲಿ ಮಾನವನ ಬದುಕು ಅಸಾಧ್ಯವಾಗುತ್ತದೆ" ಎಂದಿದ್ದಾರೆ.

ತೊಂಬತ್ತರ ದಶಕದ ನಂತರದ ರಾಜಕಾರಣ ತೀವ್ರ ಸ್ವರೂಪದಲ್ಲಿ ಕೋಮುವಾದದತ್ತ ಸರಿದದ್ದನ್ನು ಕಾಣಬಹುದು. ಜಾತಿಗಳ ನಡುವಿನ ನಿರಂತರ ಘರ್ಷಣೆ ಮತ್ತು ಗುಮಾನಿ ತನ್ನ ಅತ್ಯಂತಿಕ ಸ್ಥಿತಿಯನ್ನು ಈ ದಶಕದಲ್ಲಿ ಮುಟ್ಟಿತು. ಸಮಾಜದ ಪ್ರಜ್ಞಾವಂತ ಸಮೂಹ ಬೆಚ್ಚಿ ಬೀಳುವಂತಹ ಅನುಭವ ಇದರಿಂದಾಯಿತು. ಒಬ್ಬ ಪತ್ರಕರ್ತರಾಗಿ ಲಂಕೇಶರು ಇದರ ಬಗ್ಗೆ

ಬೇರೆಯದೆ ಆದ ಆಯಾಮದಲ್ಲಿ ಚಿಂತಿಸುತ್ತಾರೆ. ಈ ವಿವಾದವನ್ನು ತಿಳಿಗೊಳಿಸಿ ಎರಡು ಕೋಮುಗಳ ನಡುವೆ ಸಹಬಾಳ್ವೆ ನಡೆಸಲು ಬೇಕಾದ ಪ್ರೀತಿ, ವಿಶ್ವಾಸ, ಸಹನೆ ಬೆಳೆಯುವಂತೆ ನೋಡಿಕೊಳ್ಳುವುದು ಈ ಸಂದರ್ಭದ ಅನಿವಾರ್ಯತೆ ಎಂದು ಅವರು ಭಾವಿಸುತ್ತಾರೆ. ಜಾತಿ ವೈಷಮ್ಯದ ಬಗ್ಗೆ ಅವರು ಆಡುವ ಮಾತುಗಳು ಹೀಗಿವೆ. "ಜಾತಿಗಳ ಬಗ್ಗೆ ಭಾವುಕರಾಗುವವರು ಜಾತಿಗಳ ವೈಶಿಷ್ಟ್ಯ ವೈಚಿತ್ರ್ಯ ಗ್ರಹಿಸುವುದಿಲ್ಲ. ಎಲ್ಲ ರೀತಿಯ ಸಮಸ್ಯೆಗಳು ಶುರುವಾಗುವುದು "ಅವರಿಬ್ಬರ ನಡುವೆ ದುಷ್ಟರು ಕಟ್ಟಿರುವ ಗೋಡೆಗಳಿಂದ. ಮುಸ್ಲಿಮರೆಂದರೆ ಮೋಸಗಾರರು, ವಂಚಕರೆಂದು ಹಿಂದುಗಳು ತಿಳಿದಿದ್ದಾರೆ, ಹಿಂದುಗಳೆಂದರೆ ಹಂದಿ ತಿನ್ನುವ ಓದು, ಬರಹ ಹಬ್ಬ-ಪೂಜೆ ಎಲ್ಲದರಲ್ಲಿ ಮುಸ್ಲಿಮರಿಂದ ಭಿನ್ನರಾದ ಜನರೆಂದೂ ತನ್ನ ಪೂರ್ವಿಕರು ತೋರಿದ ಕ್ರೌರ್ಯ ಪರಾಕ್ರಮಕ್ಕಾಗಿ ಸೇಡು ತೀರಿಸಿಕೊಳ್ಳಲು ತುದಿಗಾಲ ಮೇಲೆ ನಿಂತಿರುವ ಜನರೆಂದೂ ಮುಸ್ಲಿಮರು ತಿಳಿಯುತ್ತಾರೆ."[೧೦]

ಆದರೆ ಇವರಿಬ್ಬರಿಗೂ ಗೊತ್ತಿಲ್ಲದ ಕೆಲವು ಸಮಾನ ಅಂಶಗಳಿವೆ. ಈ ಎರಡೂ ಧರ್ಮಗಳಲ್ಲಿ ಉದಾರಿಗಳೂ, ಜಿಪುಣರೂ, ಹಾಸ್ಯ ಪಟುಗಳೂ ಕ್ರಿಯಾಶೀಲರೂ ಭ್ರಷ್ಟರೂ ಇದ್ದಾರೆ. ಈ ಯಾರೂ ಒಂದೇ ಜಾತಿಗೆ ಸೀಮಿತವಲ್ಲ. ಒಂದೇ ಧರ್ಮದ ಸ್ವತ್ತಲ್ಲ ಈ ಎಲ್ಲವನ್ನು ಮೀರಿದ ಒಂದು ಶಾಶ್ವತ ಸತ್ಯವಿದೆ ಎರಡೂ ಜಾತಿಗಳಲ್ಲಿ ಪ್ರೀತಿ-ವಿಶ್ವಾಸಕ್ಕಾಗಿ ಹಸಿವೆ ಇದೆ."

ಈ ರೀತಿಯ ಶಾಶ್ವತ ಸತ್ಯದ ಹುಡುಕಾಟದ ಮುಖಾಂತರ ಜನಗಳ ಮನಸ್ಸನ್ನು ಕಟ್ಟುವ ಕ್ರೌರ್ಯವನ್ನು ಹಿಮ್ಮೆಟ್ಟುವ ವೈಷಮ್ಯಗಳನ್ನು ತಡೆಗಟ್ಟುವ ಗುಮಾನಿಗಳನ್ನು ಇಲ್ಲವಾಗಿಸುವ ಪ್ರಯತ್ನವನ್ನು ಲಂಕೇಶರು ಅಪೇಕ್ಷಿಸುತ್ತಾರೆ. ಈ ರೀತಿಯ ಅಪೇಕ್ಷೆ ಕೇವಲ ಬೌದ್ಧಿಕ ವಲಯದಿಂದ ಮಾತ್ರವಲ್ಲ ರಾಜಕೀಯ ರಂಗದಲ್ಲೂ ಸಾಧ್ಯವಾಗಬೇಕು ಎಂಬುದು ಅವರ ನಂಬಿಕೆ. ರಾಜಕೀಯ ರಂಗ ಎಂದ ತಕ್ಷಣ ಅದೊಂದು ಪಟಿಂಗನ ಕೊನೆಯ ಆಸರೆ ಎಂಬ ನಂಬಿಕೆ ಲಂಕೇಶರಲಿಲ್ಲ. ಬದಲಾಗಿ ಆಳವಾದ ಚಿಂತನೆ ಮತ್ತು ಧ್ಯಾನದಿಂದ ಬರುವ ಒಂದು ಕ್ರಿಯಾರೂಪಿ ಚಟುವಟಿಕೆಯಾಗಿದೆ. ಧರ್ಮದಲ್ಲಿರಬೇಕಾದ ಚಿಂತನೆ ಧ್ಯಾನಗಳು ರಾಜಕೀಯದಲ್ಲಿಯೂ ಬಂದಾಗ ಮಾತ್ರ ಸಾಮರಸ್ಯದ ರಾಜ್ಯವನ್ನು ಕಟ್ಟಿರುವುದು ಸಾಧ್ಯ ಎಂಬುದು ಲಂಕೇಶರ ಭಾವನೆ.

**ವಿಶಿಷ್ಟತೆಗಳು :**

೧. ಸಂಸ್ಕೃತಿಯ ಬಹುಮುಖತೆಯ ಕಡೆಗೆ ಗಮನ, ಬೇರೆಯವರ ಧರ್ಮ, ಆಚರಣೆ ನಂಬಿಕೆಗಳ ಬಗ್ಗೆ ಗೌರವ ಇದ್ದಾಗ ಮಾತ್ರ ಸಾಮರಸ್ಯ ಸಾಧ್ಯವಾಗುತ್ತದೆ. ಈ ಸಾಮರಸ್ಯದ ಸಾಧನೆ ಕೇವಲ ಸಾಮರಸ್ಯವಾದಿಯೊಬ್ಬನ ಬೌದ್ಧಿಕ ಆಸಕ್ತಿಗಾಗಿ ಮಾತ್ರವಲ್ಲ. ದೇಶದ ಆರ್ಥಿಕ, ಸಾಮಾಜಿಕ, ರಾಜಕೀಯ ಪ್ರಗತಿಗೂ ಅನಿವಾರ್ಯ ಎಂಬುದು ಲಂಕೇಶರ ನಿಲುವು.

೨. ಧರ್ಮದ ತಾತ್ತ್ವಿಕ ಮುಖವು ಸೃಜನಶೀಲವಾದುದು. ಆದ್ದರಿಂದಲೇ ಅದು ಲಂಕೇಶರಲ್ಲಿ ಗೌರವಾರ್ಹವಾಗಿದೆ. ಆದರೆ ಅದರ ವಾಸ್ತವ ಮುಖವು ವಿಚ್ಛಿದ್ರಕಾರಕವಾದುದು. ಅದು ಅಖಂಡತೆಯನ್ನು ಒಡೆಯುವ ಸ್ವರೂಪದ್ದು. ಆದ್ದರಿಂದ ಅದು ಆಕ್ಷೇಪಾರ್ಹ ಎಂಬುದು ಲಂಕೇಶರ ನಿಲುವು.

೩. ಧರ್ಮದ ಖಾಸಗೀತನಕ್ಕೆ ಮಹತ್ವ ನೀಡಿ ಎಲ್ಲಾ ಧರ್ಮಗಳ ಮೂಲ ಬೇರಾದ ದಯೆ, ಜವಾಬ್ದಾರಿ ಮತ್ತು ಆತ್ಮ ಸಂಯಮಕ್ಕೆ ಒತ್ತು ಹಾಕಿ ಜಾತೀಯತೆಯನ್ನು ತಿರಸ್ಕರಿಸುವ ಲಂಕೇಶರು ಗಾಂಧೀಯನ್ನು ಮೂಲಭೂತವಾದಿ ವಿತರ್ಕಕ್ಕೆ ಪರ್ಯಾಯವಾಗಿ ಲಂಕೇಶರು ಮಂಡಿಸುತ್ತಾರೆ.

೪. ಧರ್ಮ ಎನ್ನುವುದು ವೈಯಕ್ತಿಕವಾಗಿರಬೇಕು, ಕ್ರಿಯಾಶೀಲ, ವ್ಯಕ್ತಿಗೌರವ, ಮತ್ತು ಸಮಾನತೆಯ ಸುಖೀ ಸಮಾಜವೇ ಗಾಂಧೀಯ ರಾಮರಾಜ್ಯ. ಇದು ಯಾವುದೇ ಕಾರಣಕ್ಕೂ ಮೂಲಭೂತ ವಾದಿಗಳ ಕ್ಷಾತ್ರಮೂಲದ ರಾಮರಾಜ್ಯವಲ್ಲ ಎಂಬುದು ಲಂಕೇಶರ ನಿಲುವು.

೫. ದೇವಾಲಯಗಳನ್ನು ಕಮ್ಯುನಿಷ್ಟರು ಮತ್ತು ಸೋಷಿಲಿಸ್ಟರು ಒಂದು ರೀತಿಯ ತಾತ್ಸಾರ, ಸಿನಿಕತನದಿಂದ ಕಾಣುತ್ತಾರೆ. ಅವರ ಪ್ರಕಾರ ದೇವಸ್ಥಾನ ಮತ್ತು ಪೂಜಾರಿಗಳು ಶೋಷಣೆಯ ಕೇಂದ್ರಬಿಂದುಗಳು. ಆದರೆ ದೇವಸ್ಥಾನಗಳು ಸಾಮಾನ್ಯ ಜನರು ತೋರುವ ಸಮುದಾಯದ ಕೇಂದ್ರಗಳು ಎಂಬ ಅರಿವು ಅವರಿಗೆ ಇಲ್ಲ. ಸಂಸ್ಕೃತಿಯು ಇಂಥ ಅಂತಃಸತ್ವವನ್ನು ಅರಿಯದೇ ಹೋದರೆ ಚಳುವಳಿಗಳು ಬಹುಕಾಲ ಬಾಳಲಾರವು ಎಂಬುದು ಲಂಕೇಶರ ನಿಲುವು.

೬. ಜಾತಿಗಳ ಘರ್ಷಣೆ ಏರ್ಪಡದಂತೆ ಇರಬೇಕಾದರೆ ಯಾವ ರೀತಿಯ ವಾತಾವರಣ ನಿರ್ಮಿಸಬೇಕು ಎಂಬುದು ಇಂದಿನ ಬಹುಮುಖ್ಯ ಬೌದ್ಧಿಕ ಪ್ರಶ್ನೆ ಎಂಬುದು ಲಂಕೇಶರ ನಿಲುವು. ಚರಿತ್ರೆಯಿಂದ ಆಕ್ರಮಣ ಹಿಂಸೆಗಳನ್ನು ಪಡೆಯ ತೊಡಗಿದ ಜನ ವರ್ತಮಾನದಲ್ಲಿ ನಶಿಸಿಹೋಗುತ್ತಾರೆ. ಜಾತಿ–ಒಳಜಾತಿಗಳನ್ನು ನಂಬಿದ ದೇಶಗಳು ವಿನಾಶದ ಅಂಚಿನಲ್ಲಿವೆ ಎಂಬುದು ಅವರ ನಿಲುವು. ಬುದ್ಧಿ ಜೀವಿಯೊಬ್ಬನು ಭಿನ್ನ ಧರ್ಮೀಯರ ನಡುವೆ ಇರುವ ಸಂದೇಹದ ಗೋಡೆಯನ್ನು ಒಡೆಯುವ ಮನೋಭಾವದವನಾಗಿರಬೇಕೆಂಬುದು ಅವರ ಅಭಿಪ್ರಾಯ.

## ಅಧ್ಯಾಯ-೪ರ ಅಡಿಟಿಪ್ಪಣಿಗಳು :

೧. ಲಂಕೇಶ್ ಪಿ., ಟೀಕೆ-ಟಿಪ್ಪಣಿ ಸಂಪುಟ-೧, ಪತ್ರಿಕೆ ಪ್ರಕಾಶನ, ಬೆಂಗಳೂರು, ೧೯೯೭, ಪು.೧೩೩.

೨. ಲಂಕೇಶ್ ಪಿ., ಟೀಕೆ-ಟಿಪ್ಪಣಿ ಸಂಪುಟ-೧, ಪತ್ರಿಕೆ ಪ್ರಕಾಶನ, ಬೆಂಗಳೂರು, ೧೯೯೭, ಪು.೧೩೪.

೩. ಲಂಕೇಶ್ ಪಿ., ಟೀಕೆ-ಟಿಪ್ಪಣಿ ಸಂಪುಟ-೧, ಪತ್ರಿಕೆ ಪ್ರಕಾಶನ, ಬೆಂಗಳೂರು, ೧೯೯೭, ಪು.೧೩೪

೪. ಲಂಕೇಶ್ ಪಿ., ಟೀಕೆ-ಟಿಪ್ಪಣಿ ಸಂಪುಟ-೧, ಪತ್ರಿಕೆ ಪ್ರಕಾಶನ, ಬೆಂಗಳೂರು, ೧೯೯೭, ಪು.೧೩೫

೫. ಲಂಕೇಶ್ ಪಿ., ಟೀಕೆ-ಟಿಪ್ಪಣಿ ಸಂಪುಟ-೧, ಪತ್ರಿಕೆ ಪ್ರಕಾಶನ, ಬೆಂಗಳೂರು, ೧೯೯೭, ಪು.೨೦೩

೬. ಲಂಕೇಶ್ ಪಿ., ಟೀಕೆ-ಟಿಪ್ಪಣಿ ಸಂಪುಟ-೧, ಪತ್ರಿಕೆ ಪ್ರಕಾಶನ, ಬೆಂಗಳೂರು, ೧೯೯೭, ಪು.೨೦೪

೭. ಲಂಕೇಶ್ ಪಿ., ಟೀಕೆ-ಟಿಪ್ಪಣಿ ಸಂಪುಟ-೧, ಪತ್ರಿಕೆ ಪ್ರಕಾಶನ, ಬೆಂಗಳೂರು, ೧೯೯೭, ಪು.೪೦೧

೮. ಲಂಕೇಶ್ ಪಿ., ಟೀಕೆ-ಟಿಪ್ಪಣಿ ಸಂಪುಟ-೧, ಪತ್ರಿಕೆ ಪ್ರಕಾಶನ, ಬೆಂಗಳೂರು, ೧೯೯೭, ಪು.೪೬೫

೯. ಲಂಕೇಶ್ ಪಿ., ಟೀಕೆ-ಟಿಪ್ಪಣಿ ಸಂಪುಟ-೧, ಪತ್ರಿಕೆ ಪ್ರಕಾಶನ, ಬೆಂಗಳೂರು, ೧೯೯೭, ಪು.೪೬೭

೧೦. ಲಂಕೇಶ್ ಪಿ., ಟೀಕೆ-ಟಿಪ್ಪಣಿ ಸಂಪುಟ-೧, ಪತ್ರಿಕೆ ಪ್ರಕಾಶನ, ಬೆಂಗಳೂರು, ೧೯೯೭, ಪು.೪೬೮

ಅಧ್ಯಾಯ : ಐದು

# ರಾಜಕೀಯ ಲೇಖನಗಳಲ್ಲಿ ತಾತ್ತ್ವಿಕ ಬದಲಾವಣೆಯ ಕ್ರಮ: ಸಾಂಸ್ಕೃತಿಕ ಪರಿವರ್ತನೆಯ ದೃಷ್ಟಿಕೋನ

೧. ರೈತ ಮತ್ತು ನೆಲದ ಸಂಬಂಧದ ಬಗೆಗೆ ಚಿಂತನೆ.

೨. ಜಾತಿ ವರ್ಗರಹಿತ ಚಳುವಳಿಗೆ ಪ್ರೋತ್ಸಾಹ.

೩. ರೈತರ ಸಮಸ್ಯೆಗಳ ಬಗ್ಗೆ ತಾತ್ತ್ವಿಕ ಭಿನ್ನಾಭಿಪ್ರಾಯ.

೪. ತೇಜಸ್ವಿ ಪ್ರತಿಕ್ರಿಯೆ.

೫. ತೇಜಸ್ವಿಗೆ ಉತ್ತರ ನೀಡುತ್ತಲೇ ರಚನಾತ್ಮಕ ಕಾರ್ಯಗಳ ಕಡೆಗೆ ಚಿಂತನೆ.

ಅಧ್ಯಾಯ-೫

# ರಾಜಕೀಯ ಲೇಖನಗಳಲ್ಲಿ ತಾತ್ತ್ವಿಕ ಬದಲಾವಣೆಯ ಕ್ರಮ, ಸಾಂಸ್ಕೃತಿಕ ಪರಿವರ್ತನೆಯ ದೃಷ್ಟಿಕೋನ

ಭಾರತವು ಕೃಷಿ ಪ್ರಧಾನವಾದ ದೇಶ. ಆದರೆ ಇಲ್ಲಿನ ರೈತ ವರ್ಗ ಮೊದಲಿನಿಂದಲೂ ಒಂದು ರೀತಿಯ ಅಲಕ್ಷ್ಯಕ್ಕೆ ಒಳಗಾಗಿದೆ. ಈ ಸರ್ಕಾರದ ಅಲಕ್ಷ್ಯವನ್ನು ಹಲವು ರೀತಿಯಲ್ಲಿ ಸಾಹಿತಿ ಬುದ್ಧಿ ಜೀವಿ ವಲಯವು ವಿರೋಧಿಸಿದೆ. ಕುವೆಂಪು ತಮ್ಮ ಕವನ ಒಂದರಲ್ಲಿ

"ಕರಿಯರದೊ ಬಿಳಿಯರದೊ ಯಾರದಾದರೆ ಏನು?
ಸಾಮ್ರಾಜ್ಯವಾವಗಂ ಸುಲಿಗೆ ರೈತರಿಗೆ!
ವಿಜಯನಗರವೂ, ಮೊಗಲರಾಳ್ವಿಕೆಯೋ, ಇಂಗ್ಲೀಷರೋ?
ಎಲ್ಲರೂ ಜಿಗಣೆಗಳೆ ನನ್ನ ನೆತ್ತರಿಗೆ!
ಕತ್ತಿ ಪರದೇಶಿಯಾದರೆ ಮಾತ್ರ ನೋವೆ
ನಮ್ಮವರೆ ಹದ ಹಾಕಿ ತಿವಿದರದು ಹೂವೆ?"[೧]

ಎಂದು ಪರಂಪರಾಗತವಾಗಿ ಬದಲಾಗದೆ ಇರುವ ರೈತನ ಚಿತ್ರವನ್ನು ಚಿತ್ರಿಸಿದ್ದಾರೆ. ಕೃಷಿಕನೆ ದೇಶದ ಬೆನ್ನೆಲುಬು ಎನ್ನುವ ರಾಜಕೀಯ ಘೋಷಣೆಗೂ ವಾಸ್ತವ ರೈತನಿಗೂ ಅರ್ಥಾತ್ ಸಂಬಂಧವೇ ಇಲ್ಲದ್ದನ್ನು ಅವರು ವಿಡಂಬಿಸಿದ್ದಾರೆ. ಈ ರೀತಿಯ ಅಲಕ್ಷ್ಯಕ್ಕೆ ವಿರುದ್ಧವಾಗಿ ದೇಶಾದ್ಯಂತ ರೈತ ಸಂಘಟನೆಗಳು ಪ್ರಾರಂಭವಾದವು. ಕರ್ನಾಟಕವು ಈ ರೀತಿಯ ಸಂಘಟನೆಗಳಿಗೆ ನೆಲೆಯಾಗಿದೆ.

ಕರ್ನಾಟಕದಲ್ಲಿ ರೈತ ಸಂಘಗಳು ಸ್ಥಾಪನೆಯಾಗಲು ಪ್ರಮುಖ ಕಾರಣ ಹಿಂದೆ ಹೇಳಿದಂತೆ ವ್ಯವಸಾಯ ಪ್ರಧಾನತೆ. ಆದರೂ ರಾಜಕೀಯರಂಗಕ್ಕೆ ಬಂದಾಗ ಈ ಸಂಘಟನೆ ಅಧಿಕಾರ ಪಡೆಯಲು ವಿಫಲವಾಯಿತು ಏಕೆ? ಈ ಪ್ರಶ್ನೆ ಮುಖ್ಯವಾಗುತ್ತದೆ. ಈ ಪ್ರಶ್ನೆಗೆ ಉತ್ತರ ಹುಡುಕುವಾಗ ಲಂಕೇಶರು ರೈತ ಸಂಘಗಳು ಹೇಗೆ ಬಲಿಷ್ಠ ಜಾತಿಗಳ ಹಿಡಿತದಲ್ಲಿವೆ ಎಂಬುದನ್ನು ಚಿಂತಿಸಿದ್ದಾರೆ. ಹಾಗೆಯೇ ರೈತ ಮತ್ತು ನೆಲದ ಸಂಬಂಧವನ್ನು ಜಪಾನಿನ ಕೃಷಿಕ ಪುಕುವೊಕಾನ ಹಿನ್ನೆಲೆಯಲ್ಲಿ ಚರ್ಚಿಸಿ ಭಾರತೀಯ ಕೃಷಿ ರಂಗದಲ್ಲಿ ಪರ್ಯಾಯದ ಚಿಂತನೆಯ ಸಾದ್ಯತೆಕಡೆಗೆ ದೃಷ್ಟಿ ಹಾಯಿಸಿದ್ದಾರೆ. ಜಾತಿ ವರ್ಗರಹಿತ ಚಳುವಳಿ ಯಶಸ್ವಿಯಾಗಬಹುದಾದ ಆಶಾವಾದ ಲಂಕೇಶರಲ್ಲಿದೆ. ಒಂದು ಕಡೆ ರೈತ ಅಂಘದ ಆಶಯದ ಬಗ್ಗೆ ಗೌರವವಿದ್ದೂ ಅದು ಬಲಿಷ್ಠ ಜಾತಿಗಳ ಹಿಡಿತದಲ್ಲಿ ದಲಿತ, ಕೆಳವರ್ಗದವರ ಪ್ರಶ್ನೆಗಳನ್ನು ನಿರ್ಲಕ್ಷಿಸಿದಾಗ

ವಿರೋಧಿಸುವ ದೃಷ್ಟಿಕೋನ ಅವರ ತಾತ್ತ್ವಿಕ ಬದಲಾವಣೆಯ ಕ್ರಮವನ್ನು ಸೂಚಿಸುತ್ತವೆ. ಈ ಹಿನ್ನೆಲೆಯಲ್ಲಿ ಕೆಳಗಿನ ಉಪ ಆಶಯಗಳನ್ನು ಮಾಡಿಕೊಂಡು ಅಧ್ಯಯನ ಮಾಡಿದ್ದೇನೆ.

೧. ರೈತ ಮತ್ತು ನೆಲದ ಸಂಬಂಧದ ಬಗೆಗೆ ಚಿಂತನೆ.

೨. ಜಾತಿ ವರ್ಗರಹಿತ ಚಳುವಳಿಗೆ ಪ್ರೋತ್ಸಾಹ.

೩. ರೈತರ ಸಮಸ್ಯೆಗಳ ಬಗ್ಗೆ ತಾತ್ತ್ವಿಕ ಭಿನ್ನಾಭಿಪ್ರಾಯ.

೪. ತೇಜಸ್ವಿ ಪ್ರತಿಕ್ರಿಯೆ.

೫. ತೇಜಸ್ವಿಗೆ ಉತ್ತರ ನೀಡುತ್ತಲೇ ರಚನಾತ್ಮಕ ಕಾರ್ಯಗಳ ಕಡೆಗೆ ಚಿಂತನೆ.

**೧. ರೈತ ಮತ್ತು ನೆಲದ ಸಂಬಂಧದ ಬಗೆಗೆ ಚಿಂತನೆ.**

ಭಾರತ ವ್ಯವಸಾಯ ಪ್ರಧಾನವಾದ ದೇಶ. ಇಲ್ಲಿನ ಕೃಷಿಯು ಮಳೆಯೊಡನೆ ಆಡುವ ಜೂಜಾಟವಿದ್ದಂತೆ. ಹೀಗಾಗಿ ಮಳೆಯನ್ನು ಆಶ್ರಯಿಸಿ ವ್ಯವಸಾಯವನ್ನ ಮಾಡುವುದರಿಂದ ಇಲ್ಲಿನ ವ್ಯವಸಾಯ ಕ್ರಮವು ಸ್ವಾಭಾವಿಕವಾಗಿದ್ದರೆ ಮಾತ್ರ ಶ್ರಮಕ್ಕೆ ತಕ್ಕ ಪ್ರತಿಫಲ ದೊರೆಯುತ್ತದೆ ಎಂಬುದು ಸಾಮಾನ್ಯವಾದ ತಿಳುವಳಿಕೆ. ರೈತನ ಮತ್ತು ಭೂಮಿಯ ಸಂಬಂಧ ಅನ್ಯೋನ್ಯವಾದುದು. ಇಲ್ಲಿ ಏನಾದರೂ ಏರುಪೇರುಗಳಾದರೂ ವ್ಯವಸಾಯದ ಬೆಳವಣಿಗೆಯಲ್ಲಿ ಕುಂಟಿತವಾಗುತ್ತದೆ.

ನಮ್ಮ ಸರ್ಕಾರಗಳು ಕೃಷಿಯಲ್ಲಿ ಕ್ರಾಂತಿಯನ್ನು ಉಂಟುಮಾಡಲು ಆಧುನಿಕವಾಗಿ ಹೊಸ–ಹೊಸ ತಳಿಗಳನ್ನು, ರಸಗೊಬ್ಬರಗಳನ್ನು ಮತ್ತು ಕೀಟನಾಶಕಗಳನ್ನು ಬಳಸುವ ದಿಕ್ಕಿನಲ್ಲಿ ಸಾಗಿದೆ, ಸಾಧ್ಯವಾದಷ್ಟು ಪ್ರಗತಿಯನ್ನು ಸಾಧಿಸಿದೆ. ಆದರೆ ಅತಿಯಾದ ಒತ್ತಡಸಹಿತವಾದ ಈ ಬದಲಾವಣೆಯು ಅನೇಕ ಅಪಾಯಗಳಿಗೆ ಕಾರಣವಾಯಿತು. ಕೇಂದ್ರ ಸ್ಥಾನವಾದ ಭೂಮಿಯು ತನ್ನ ಫಲವತ್ತತೆಯನ್ನು ಕಳೆದುಕೊಳ್ಳುತ್ತಾ ಬಂಜರಾಗುತ್ತಿದೆ ಮತ್ತು ಪುನಃ ಆಹಾರದ ಸಮಸ್ಯೆ ಉಂಟಾಗುವ ಸಾಧ್ಯತೆಗಳಿವೆ. ಇದು ಇಂದಿನ ಸಮಸ್ಯೆಗಳಲ್ಲಿ ಒಂದಾಗಿದೆ. ಒಂದು ಕಡೆ ಹಸಿರು ಕ್ರಾಂತಿಯ ಬೆಂಬತ್ತಿದ ಸರ್ಕಾರ ಮತ್ತು ರೈತರು ಆಧುನಿಕ ಕೃಷಿಯ ಹಿಂದೆ ಬಿದ್ದು ಭೂಮಿ ಮತ್ತು ರೈತನ ಸಾವಯುವ ಸಂಬಂಧವನ್ನು ಮರೆತಿದ್ದು ಈ ಸಮಸ್ಯೆಯ ಮೂಲ.

ಈ ರೀತಿಯ ಸಮಸ್ಯೆಯನ್ನು ಬೆಂಬತ್ತಿದ ಲಂಕೇಶರು ರೈತನೊಬ್ಬನ ಹುಲ್ಲುಕಡ್ಡಿಯ ಪವಾಡ ಎಂಬ ಲೇಖನದಲ್ಲಿ ನೈಸರ್ಗಿಕ ಕೃಷಿಯ ಮಹತ್ವ ಮತ್ತು ಅಗತ್ಯವನ್ನು ಕುರಿತು ವಿವರವಾಗಿ ತಿಳಿಸಿದ್ದಾರೆ. ಫುಕುವೊಕಾ ಆಧುನಿಕ ಬೇಸಾಯ ಪದ್ಧತಿಯನ್ನು ತಿರಸ್ಕರಿಸಿ ತನ್ನದೇ ಆದ ಸಹಜ, ಸ್ವಾಭಾವಿಕ, ಕೃಷಿ ವಿಧಾನವನ್ನು ಅಭಿವೃದ್ಧಿಗೆ ತಂದಿದ್ದಾರೆ. ಈತನ ಪ್ರಕಾರ ಭೂಮಿಯನ್ನು ಊಳುವುದು ಮನುಷ್ಯನ ಅಹಂಕಾರದ ಒಂದು ರೂಪವಿದ್ದಂತೆ. ಭೂಮಿಯನ್ನು

ಛಿದ್ರಿಸುವುದು ಅದರ ಐಕ್ಯತೆ, ಅಖಂಡತೆ ಮತ್ತು ಫಲವತ್ತತೆಯನ್ನು ನಾಶಮಾಡಿದಂತೆ ಎಂದು ಭಾವಿಸಿದ. ಭೂಮಿಯೇ ಬೀಜಕ್ಕೆ ನೇರವಾಗಿ ಒಳಗಾಗುವಂತೆ ಮಾಡಿದನು. ಇಲ್ಲಿ ಯಾವುದೇ ಪರ್ಯಾಯ ವಿಧಾನವನ್ನು ಬಳಸದೆ ಬೀಜ ಮತ್ತು ಭೂಮಿ ಸಂಬಂಧ ಕೆಡದಂತೆ ಕಾಪಾಡುವುದು ಮುಖ್ಯವೆಂದು ಅವನು ತೋರಿಸಿಕೊಟ್ಟನು.[೨] ಈ ವಿಧಾನದಿಂದ ಭೂಮಿಯು ತನ್ನ ಶಕ್ತಿಯನ್ನು ಪಡೆದುಕೊಂಡು ನಂತರದ ದಿನಗಳಲ್ಲಿ ಬೆಳೆಯಿಂದ ಹೆಚ್ಚಿನ ಇಳುವರಿಯು ದೊರೆಯಿತು. ಇಲ್ಲಿ ಮನುಷ್ಯನ ಶ್ರಮ ಕಡಿಮೆ. ಆದಾಯ ಹೆಚ್ಚಾಯಿತು ಮತ್ತು ಪರಿಸರ ಮಾಲಿನ್ಯದಂತಹ ಕೆಲವು ಸಮಸ್ಯೆಗಳಿಗೆ ಪರಿಹಾರ ದೊರೆಯಿತು. ಈತನ ಈ ಪವಾಡದಿಂದ ಭಾರತದಂತಹ ಹಿಂದುಳಿದ ದೇಶಗಳಿಗೆ ಬಹು ಪ್ರಯೋಜನವಾಗಲಿದೆ ಎಂದು ಲಂಕೇಶರು ಅಭಿಪ್ರಾಯವನ್ನು ವ್ಯಕ್ತಪಡಿಸಿದ್ದಾರೆ.

ಈ ಅಭಿಪ್ರಾಯದ ಹಿಂದೆ ಸಹಜವಾಗಿ ರೈತ ಮತ್ತು ಭೂಮಿಯ ಸಂಬಂಧ ಸಾವಯುವವಾಗಿ ಉಳಿಯಬೇಕೆಂದು ಧೋರಣೆಯಿದೆ. ವ್ಯವಸಾಯ ಅಥವಾ ನಿರ್ವಹಿಸುವ ಯಾವುದೇ ಕಾರ್ಯವು ವ್ಯಕ್ತಿತ್ವದ ಅಭಿವ್ಯಕ್ತಿಯಾಗಬೇಕೆನ್ನುವ ಮನೋಭಾವನೆ ಇದೆ. ಆಧುನಿಕತೆಯ ಹಿಂದೆ ಬಿದ್ದ ಭಾರತೀಯ ಸಮಾಜದ ಕೃಷಿಯ ಅತಿರೇಖಕ್ಕೆ ಲಂಕೇಶರು ಪುಕುವೊಕಾನ ಮುಖಾಂತರ ಪರ್ಯಾಯ ಸೂಚಿಸಿದ್ದಾರೆ.

**೨. ಜಾತಿ-ವರ್ಗರಹಿತ ಚಳುವಳಿಗೆ ಪ್ರೋತ್ಸಾಹ :**

ಈ ದೇಶದಲ್ಲಿರುವ ಅನೇಕ ರೈತರು ಅನಕ್ಷರಸ್ಥರು. ಕೆಲವರು ಸ್ವಂತ ಭೂಮಿಯನ್ನು ಹೊಂದದೆ ಬೇರೆಯವರ ಭೂಮಿಯಲ್ಲಿಯೇ ದುಡಿಯುತ್ತಾ ಜೀತದಾಳುಗಳಾಗಿ ಅವರ ಗುಲಾಮರಂತೆ ಬದುಕುತ್ತಿದ್ದಾರೆ. ಅವರಲ್ಲಿರುವ ಬಡತನ ಹಸಿವು ಹೆಚ್ಚಾಗುತ್ತಿವೆ. ಭೂಮಿ ಉಳ್ಳವರು ಮಳೆಯನ್ನು ಆಶ್ರಯಿಸಿ ವ್ಯವಸಾಯವನ್ನು ಮುಂದುವರಿಸುತ್ತಾ ಕೆಲವು ಸಮಸ್ಯೆಗಳನ್ನು ಎದುರಿಸುತ್ತಾ ಅತಿವೃಷ್ಟಿ-ಅನಾವೃಷ್ಟಿಗಳಿಗೆ ಸಿಲುಕಿದ್ದಾರೆ. ಇದು ಭಾರತದಲ್ಲಿ ಕಂಡುಬರುತ್ತಿರುವ ಸಾಮಾನ್ಯ ಸಂಗತಿಯಾಗಿದೆ.

ಲಂಕೇಶರು ಗಡ್ಡದ ಶಾಮಣ್ಣ ಎನ್ನುವ ಲೇಖನದಲ್ಲಿ ಭಾರತದ ಉಸಿರಾಗಿರುವ ರೈತರ ಕೆಲವು ಸಮಸ್ಯೆಗಳಿಗೆ ಪರಿಹಾರವನ್ನು ಸೂಚಿಸಿದ್ದಾರೆ. ತೀರ್ಥಹಳ್ಳಿ ಒಮ್ಮೆ ಪ್ರವಾಹದಿಂದ ಮುಳುಗಿತು. ಅನೇಕ ರೈತರು ಮನೆ ಆಸ್ತಿಗಳನ್ನು ಕಳೆದುಕೊಂಡು ಕಂಗಾಲಾದರು. ಸರ್ಕಾರ ನಿರಾಶ್ರಿತರಿಗೆ ಪರಿಹಾರ ಕೊಡುತ್ತೇನೆಂದು ಹೇಳಿ ಕಣ್ಣೀರೊರೆಸಿತು. ರೈತರ ಬದುಕು ಕಠಿಣವಾಯಿತು. "ಆಗ ರೈತರ ನಾಯಕನಾಗಿ ನೊಂದವರ ಉಸಿರಾಗಿ ನಾಗಸಮುದ್ರದ ಕಡಿದಾಳು ಶಾಮಣ್ಣನವರು ಸರ್ಕಾರವನ್ನು ಒತ್ತಾಯಿಸಿದರು. ಆಗ ಅಧಿಕಾರಿಗಳು ಪರಿಹಾರದ ಹಣವನ್ನು ಕೊಡುತ್ತೇವೆಂದು ಬಿಡುಗಡೆಯಾದ ಹಣವನ್ನು ದೋಚಿದರು. ಶಾಮಣ್ಣನವರ ಕರೆಗೆ

ಅಧಿಕಾರಿಗಳು ಬೆಲೆ ಕೊಡಲಿಲ್ಲ."[3] ಆಗ ಬೇರೆ ದಾರಿಯಿಲ್ಲದೆ ಶಾಮಣ್ಣನವರು ಉಪವಾಸಕ್ಕೆ ಕೂತರು ಅಧಿಕಾರಿಗಳು ಅಲಕ್ಷಿಸಿದರು. ಮೂರು ದಿನಗಳಲ್ಲಿ ಶಾಮಣ್ಣನವರ ದೇಹ ಸ್ಥಿತಿ ಕೆಡುತ್ತಾ ಬಂತು. ಅಲ್ಲಿಗೆ ಅನೇಕ ರೈತರು ಸೇರತೊಡಗಿದರು. ಅಧಿಕಾರಿಗಳಿಗೆ ಭಯವಾಗಿ ಕೂಡಲೇ ಮೂವತ್ತು ಸಾವಿರ ಕೊಟ್ಟರು ನೆರೆ ಪರಿಹಾರದ ಹಣವನ್ನು ಸಹ ಕೊಡುವುದಾಗಿ ಹೇಳಿದರು. ತೀರ್ಥಹಳ್ಳಿಯ ರೈತರ ಬದುಕು ಸುಧಾರಿಸಿತು. ಶಾಮಣ್ಣನವರು ರೈತರ ನಾಯಕರಾದರು.

ಈ ಘಟನೆಯಲ್ಲಿ ಲಂಕೇಶರಿಗೆ ಮುಖ್ಯವಾಗುವುದು ಶಾಮಣ್ಣನವರ ಜಾತಿ ವರ್ಗಗಳನ್ನು ದಾಟಿದ ಮನುಷ್ಯ ಪ್ರೀತಿ. ರೈತರ ಹೋರಾಟಕ್ಕೆ ಗಾಂಧಿ ಮಾರ್ಗದ ಪರ್ಯಾಯವನ್ನು ಅವರು ಪರಿಚಯಿಸಿದ ರೀತಿ. ಶಾಮಣ್ಣನವರ ತಮಾಷೆ, ಮಾನವ ಸಹಜ ಗುಣಗಳನ್ನು ಗುರುತಿಸುತ್ತಾ ಈ ರೀತಿಯ ಹೋರಾಟ ರೈತರಿಗೆ ಮಾದರಿ ಎಂಬುದನ್ನು ಲಂಕೇಶರು ಗುರುತಿಸಿದ್ದಾರೆ. ಹಾಗೆಯೇ ರೈತ ಚಳುವಳಿಗಳು ವಿಸ್ತೃತ ನೆಲೆಯಲ್ಲಿ ಜಾತಿ ವರ್ಗಗಳನ್ನು ಮೀರಿದ ಸಮುದಾಯದ ಚಳುವಳಿಗಳಾಗಬೇಕು ಎಂಬುದನ್ನು ಲಂಕೇಶರು ಪ್ರತಿಪಾದಿಸುತ್ತಾರೆ.

**೩. ರೈತ ಸಂಘಟನೆಗಳ ಬಗ್ಗೆ ತಾತ್ತ್ವಿಕ ಭಿನ್ನಾಭಿಪ್ರಾಯ :**

ಕರ್ನಾಟಕದಲ್ಲಿ ಆರುನೂರು ರೈತ ಸಂಘಗಳಿವೆ. ರೈತರ ಸಮಸ್ಯೆಗಳ ಕಡೆ ನಿರ್ಲಕ್ಷ್ಯ ತೋರಿದ್ದ ಸರ್ಕಾರಗಳಿಗೆ ಎಚ್ಚರ ನೀಡಲು ರೈತ ಸಂಘಗಳ ಹುಟ್ಟು ಅನಿವಾರ್ಯವಾಗಬೇಕಾಯಿತು. ಈ ರೀತಿಯ ರೈತ ಸಂಘಗಳಿಂದ ಜನಪ್ರಿಯರಾದವರು ಸ್ಥಳೀಯ ಮಟ್ಟದಿಂದ ಹಿಡಿದು ಉನ್ನತ ಮಟ್ಟದವರೆಗೆ ರಾಜಕೀಯ ಅಧಿಕಾರವನ್ನು ಹಿಡಿದಿದ್ದಾರೆ. ಈ ರೈತ ಸಂಘಗಳಲ್ಲಿ ಬಹಳ ಮುಖ್ಯವಾದದ್ದೆಂದು ಲಂಕೇಶರು ಗುರುತಿಸುವುದು "ಪ್ರೊ. ಎಂ.ಡಿ. ನಂಜುಂಡಸ್ವಾಮಿಯವರ "ಕರ್ನಾಟಕ ರಾಜ್ಯ ರೈತ ಸಂಘ"[4] ಕಾರಣ ವಿಷ್ಟೇ ಈ ಸಂಘ ರೈತರ ಸಮಸ್ಯೆಗಳನ್ನು ಆರ್ಥಿಕ ಸಂದರ್ಭದಲ್ಲಿಟ್ಟು ರೈತ ಮತ್ತು ಸರ್ಕಾರದ ನಡುವಿನ ಸಂಬಂಧವನ್ನು ಮೊದಲನೆಯದಾಗಿ ವಿಶ್ಲೇಷಿಸಿದರು ಎಂದು. ಈ ರೀತಿಯ ವಿಶ್ಲೇಷಣೆ ರೈತರಲ್ಲಿ ಮೊದಲಿಗೆ ಸರ್ಕಾರವನ್ನು ಪ್ರಶ್ನಿಸುವ ಮನೋಭಾವವನ್ನು ಮೂಡಿಸಿತು.

ರೈತ ಸಂಘ ಇಂದು ರೈತರಲ್ಲಿ ಪ್ರಶ್ನಿಸುವ ಪ್ರತಿಭಟಿಸುವ ಛಾತಿಯನ್ನು ಹುಟ್ಟಿಸಿದ್ದಕ್ಕೆ ಲಂಕೇಶರಲ್ಲಿ ಮೆಚ್ಚುಗೆಯಿದೆಯಾದರೂ ಅದನ್ನು ದಾಟಿ ಅಂದರ ತಾತ್ತ್ವಿಕ ನಿಲುವುಗಳಲ್ಲಿರುವ ಕೆಲವು ಲೋಪದೋಷಗಳನ್ನು ಟೀಕಿಸುತ್ತಾರೆ. ರೈತ ಸಂಘದ ಮೇಲೆ ಅವರಿಗಿರುವ ಮುಖ್ಯವಾದ ತೊಡಕು "ರೈತ ಸಂಘದಿಂದ ಗ್ರಾಮದ ರಾಜಕೀಯ ಮುಖಾ-ಮುಖಿಗಳು ಬದಲಾಗಲಿಲ್ಲ. ಅಲ್ಲಿದ್ದ ರಾಜಕೀಯ ಏರುಪೇರು ಇನ್ನು ಹೆಚ್ಚಾಯಿತು"[5] ಎಂಬುದು. ಅಂದರೆ ರೈತ ಸಂಘಗಳು ಗ್ರಾಮದ ಸಾಮಾಜಿಕ ಸಮಸ್ಯೆಗಳ ಕಡೆ ಗಮನಹರಿಸಲಿಲ್ಲ. ಒಂದು ರಾಜಕೀಯ ಪಕ್ಷವಾಗಿ ರೈತ ಸಂಘದ ವಿಫಲತೆಗೆ ಬಹುಶಃ ಕಾರಣ ಇದೆ. ರೈತ ಸಂಘಗಳು ಭೂಸ್ವಾಮ್ಯವನ್ನು

ಹೊಂದಿದವರನ್ನು ಒಳಗೊಂಡಿವೆ. ಈ ಸ್ವಾಮ್ಯವು ಸಾಮಾನ್ಯವಾಗಿ ಲಿಂಗಾಯಿತ ಮತ್ತು ಒಕ್ಕಲಿಕ ಜಾತಿಗಳಲ್ಲಿ ಕೇಂದ್ರೀಕರಣಗೊಂಡಿದೆ. ಈ ಕಾರಣಕ್ಕಾಗಿಯೋ ಏನೋ ರೈತ ಸಂಘಗಳು, ಗ್ರಾಮಗಳಲ್ಲಿ ತಲೆತಲಾಂತರದಿಂದ ಬಂದ ಜಾತಿ ಪದ್ಧತಿಯ ಬಗ್ಗೆ ಯಾವುದೇ ಚಕಾರ ಎತ್ತಲಿಲ್ಲ ಎಂಬುದು ಲಂಕೇಶರ ಅಭಿಪ್ರಾಯ. ವೆಂಕಟಸ್ವಾಮಿ ವರದಿಯನ್ನು ರೈತ ಸಂಘಗಳು ವಿರೋಧಿಸಿದ್ದನ್ನು ಲಂಕೇಶರು ಇದಕ್ಕೆ ಸಮರ್ಥನೆಯಾಗಿ ಉದಾಹರಿಸಿದ್ದಾರೆ.

ಈ ರೀತಿಯ ಆಂತರಿಕ ಲೋಪವನ್ನು ಸುಧಾರಿಸಿಕೊಳ್ಳಲು ಲಂಕೇಶರು ಸೂಚಿಸುವ ಮಾರ್ಗ ವಿಶಿಷ್ಟವಾದದ್ದು. "ಹರಿಜನರ ಹಿಂದುಳಿದವರ ಆರ್ಥಿಕ ದುರ್ಬಲರ ಸಮಸ್ಯೆಗಳು ಕೇವಲ ಹರಿಜನರಿಗೆ ಹಿಂದುಳಿದವರಿಗೆ ಸಂಬಂಧಿಸಿದವಲ್ಲ. ಅವು ಆರ್ಥಿಕವಾಗಿ ಪ್ರಬಲರಾದವರೊಂದಿಗೆ ಸೇರಿಕೊಂಡು ಪರಿಹರಿಸಬೇಕಾದ ಸಮಸ್ಯೆಗಳು ಇಡೀ ಸಮಾಜದ ಸಮಸ್ಯೆಗಳು"[೬] ಎನ್ನುವ ರೀತಿಯಲ್ಲಿ ನೋಡಿ ರಾಜಕೀಯ ಸಮುದಾಯವನ್ನು ರೂಪಿಸಬೇಕು ಎಂಬುದು ಅವರ ಅಭಿಪ್ರಾಯ. ಸರ್ಕಾರಗಳು ರೈತರ ಸಾಲವನ್ನು ಬೆಳೆಗಳಿಗೆ ತಕ್ಕ ಬೆಲೆ ನಿಗದಿ ಇತ್ಯಾದಿ ಘೋಷಣೆಗಳಿಗಿಂತ ಸಾಲದ ಅಗತ್ಯವೇ ಇಲ್ಲದಂಥ ಆರ್ಥಿಕ, ಸಾಮಾಜಿಕ, ಸಂಬಂಧಗಳನ್ನು ನಿರ್ಮಿಸಬೇಕೆಂಬುದು ಅವರ ನಿಲುವು. ಗ್ರಾಮದ ಆರ್ಥಿಕ ಸಮಸ್ಯೆಯ ಜೊತೆಗೆ, ಸಾಮಾಜಿಕ ಜಾತಿಪದ್ಧತಿಯ ಹಂದರಗಳನ್ನು ತೊಡೆಯುವ ಹೊಸ ರೀತಿಯ ಜಾತ್ಯಾತೀತ ವ್ಯವಸ್ಥೆ ಮೂಡಿದಾಗ ಮಾತ್ರ ಗ್ರಾಮದ ಬದುಕು ಹಸನಾಗಬಲ್ಲದು ಎಂಬುದು ಲಂಕೇಶರ ಭಾವನೆ.

**೪. ತೇಜಸ್ವಿ ಪ್ರತಿಕ್ರಿಯೆ :**

ಲಂಕೇಶ್‌ರವರ 'ರೈತರು: ಒಂದು ರಾಜಕೀಯ ಟಿಪ್ಪಣಿ' ಎಂಬ ಲೇಖನಕ್ಕೆ ತೇಜಸ್ವಿಯವರ ಪ್ರತಿಕ್ರಿಯೆ ಬಹಳ ಮುಖ್ಯವಾದ ಪ್ರಶ್ನೆಗಳನ್ನು ಎತ್ತಿದೆ. ರೈತ ಸಂಘಗಳು ಸ್ಥಾಪನೆಯಾದದ್ದು ಮುಖ್ಯವಾಗಿ ರೈತರ ಅಥವಾ ಇತರೇ ಯಾವುದೇ ವೃತ್ತಿಯವರ ಸಮಸ್ಯೆ ಬಗೆಹರಿಸಲು ಆದ್ದರಿಂದ ಯಾವುದೇ ಒಂದು ಜಾತಿಗಾದರೂ ಹೆಚ್ಚಿನ ಲಾಭದೊರೆತಿದೆ. ಈ ರೀತಿಯ ಸಂಘಟನೆಗಳು ಗ್ರಾಮದ ಇತರರಿಗೆ ತೊಂದರೆಯಾಗದಂತೆ ನೋಡಿಕೊಂಡರೆ ಸಾಕು. ಯಾವುದೇ ಸಂಘಟನೆಯಿಂದ ನಾವು ಸರಿಯಾದ ಅಭಿವೃದ್ಧಿಯ ನಿರೀಕ್ಷೆಯನ್ನು ನಿರೀಕ್ಷಿಸಲು ಸಾಧ್ಯವಿಲ್ಲ. ರೈತ ಸಂಘಗಳು ಬೆಳವಣಿಗೆ ಹೊಂದುವುದು ಸರಿಯಾದ ರಚನಾತ್ಮಕವಾದ ರೂಪುರೇಷೆಗಳಿಂದ ರೈತರ ಜೀವನ ವಿಧಾನ, ಅವರ ಜಾತಿ ಸಂಪ್ರದಾಯಗಳು ಮತ್ತು ಸಮಸ್ಯೆಗಳು ಬಹಳ ಹಳೆಯವು. "ಆದ್ದರಿಂದ ಬದಲಾವಣೆಗೆ ಹೆಚ್ಚಿನ ಸಮಯ ಬೇಕಾಗಬಹುದು. ರೈತ ಸಂಘಗಳು ಮತೀಯ ಮತ್ತು ಧಾರ್ಮಿಕ ಶಕ್ತಿಗಳನ್ನು ಆಶ್ರಯಿಸಿ ತಮ್ಮ ಶಕ್ತಿಯನ್ನು ಬೆಳೆಸುತ್ತಿಲ್ಲ. "ಆದ್ದರಿಂದ ರೈತರು ಮೇಲ್ವರ್ಗದವರ ಮಸೀದಿ, ದೇವಸ್ಥಾನಗಳ ವಿರುದ್ಧ

ಹೋರಾಟಕ್ಕೆ ಇಳಿಯಲು ಸಾಧ್ಯವಿಲ್ಲ. ಇಂದು ಸಾಹಿತಿಗಳು ಪತ್ರಿಕೆಗಳ ಮುಖಾಂತರ ಮಾಡುತ್ತಿರುವ ಜಾಗೃತಿಯನ್ನು ರೈತ ಚಳವಳಿಯಿಂದ ಪ್ರತ್ಯೇಕಿಸಲು ಸಾಧ್ಯವಿಲ್ಲ. ರೈತ ಸಂಘದ ನಾಯಕರಿಗೂ, ಸಾಹಿತಿಗಳಿಗೂ ಭಿನ್ನಾಭಿಪ್ರಾಯಗಳಿದ್ದರೂ ಇವೆಲ್ಲಾ ಒಂದು ಆಲೋಚನೆಯ ಭಾಗಗಳಾಗಿಯೇ ಉಳಿಯುತ್ತವೆ ಎಂದಿದ್ದಾರೆ."[೭]

ತೇಜಸ್ವಿಯವರು ವಾಸ್ತವಿಕ ನೆಲೆಗಟ್ಟಿನಲ್ಲಿ ನಿಂತು ರೈತ ಸಂಘದಲ್ಲಿ ಇರಬಹುದಾದ ಇತಿಮಿತಿಗಳನ್ನು ಹೇಳಿದರೂ, ಇಲ್ಲಿರುವ ಬಲಿಷ್ಠ ಜಾತಿಯ ಹಿಡಿತವನ್ನು ನಿರ್ಲಕ್ಷಿಸಿದ್ದಾರೆ ಎನಿಸುತ್ತದೆ. ಲಂಕೇಶರು ಸೂಚಿಸುವ ಗ್ರಾಮೀಣ ಸಮುದಾಯದ ಸಮಗ್ರ ಬದಲಾವಣೆಯು ಜಾತಿ, ವರ್ಗ, ಅಸಮಾನತೆಗಳಿಂದ ಮುಕ್ತವಾದ ಸಮಾಜವನ್ನು ಪ್ರತಿಪಾದಿಸುವಂಥದ್ದು. ಜಾತಿಪದ್ಧತಿ ಇತ್ಯಾದಿಗಳನ್ನು ಹೋಗಲಾಡಿಸಲು ಬಹಳ ಕಾಲ ಬೇಕು ಎಂಬ ತೇಜಸ್ವಿಯವರ ಅಭಿಪ್ರಾಯ ಸರಿಯಾದದ್ದು. ಆದರೂ ಎಲ್ಲಿಯವರೆಗೆ ಈ ಕಾಲವನ್ನು ಮುಂದೂಡಲು ಸಾಧ್ಯ? ಎಂಬ ಪ್ರಶ್ನೆಯನ್ನು ಇಲ್ಲಿ ಕೇಳಿಕೊಳ್ಳಬೇಕಾಗುತ್ತದೆ.

**೫. ತೇಜಸ್ವಿಯವರಿಗೆ ಉತ್ತರ ನೀಡುತ್ತಲೇ ರಚನಾತ್ಮಕ ಕಾರ್ಯಗಳ ಕಡೆಗೆ ಚಿಂತನೆ :**

"ತೇಜಸ್ವಿಯವರ ಲೇಖನಕ್ಕೆ ಪ್ರತಿಕ್ರಿಯಿಸುತ್ತ ಲಂಕೇಶರು ರೈತನಾಯಕರು ರಾಜಕೀಯ ಚುನಾವಣಾ ಪಕ್ಷ ಪ್ರಣಾಳಿಕೆಯನ್ನು ಮಾತಾಡುವ ಹಿನ್ನೆಲೆಯನ್ನಿಟ್ಟು ನೋಡಬೇಕೆಂದಿದ್ದಾರೆ. ರೈತರು ಹೋರಾಟಗಳನ್ನು ಮಾಡುವುದು ಕೇವಲ ಕಿರುಚಾಡುವುದಕ್ಕಲ್ಲ. ಅದರಿಂದ ಯಾವುದಾದರೂ ಪ್ರಯೋಜನಕ್ಕಾಗಿ."[೮] ಅಧಿಕಾರವನ್ನು ಹಿಡಿದವರಿಗೆ ಗುರಿ ಮತ್ತು ಮಾರ್ಗಗಳೆರಡೂ ಮುಖ್ಯವಾಗುತ್ತವೆ. ಸರ್ಕಾರದ ಮೊದಲ ಪ್ರಾಶಸ್ತ್ಯ ಬಡವರಿಗಿರಬೇಕು. ನೆಲೆಯಿಲ್ಲದವರಿಗೆ ಆಶ್ರಯವಾಗಿರಬೇಕು. ಉಳ್ಳವರಿಂದ ಹಿಂಸೆಯನ್ನು ಅನುಭವಿಸುವವರಿಗೆ ಬಿಡುಗಡೆಯಾಗಿರಬೇಕು, ಬಂಧನವಾಗಿರಬಾರದು. ಇವತ್ತಿನ ನಮ್ಮ ರಾಜಕೀಯ ಮುಖಂಡರು ಹಳ್ಳಿಗೆ ಪ್ರವೇಶವನ್ನು ಮಾಡಿದರೆ ಅವರು ಮೊದಲು ಈ ಊರಿನ ಗೌಡ, ಜಮೀನ್ದಾರರ ಮನೆಗೆ ಹೋಗಿ ಅವರ ಒಪ್ಪಿಗೆಯಂತೆ ಹಳ್ಳಿಯ ಬಗ್ಗೆ ಮಾಹಿತಿಯನ್ನು ಸಂಗ್ರಹಿಸುತ್ತಾರೆ. ಅಲ್ಲಿನ ದಲಿತರ, ಶೂದ್ರರ ಸಮಸ್ಯೆಗಳ ಬಗ್ಗೆ ಯಾವುದೇ ಕಾಳಜಿಯನ್ನು ವಹಿಸುವುದಿಲ್ಲ. ಈ ವ್ಯವಸ್ಥೆಗಳು ಇಂದು ಬದಲಾಗಬೇಕಿದೆ. ವೆಂಕಟಸ್ವಾಮಿಯವರ ವರದಿಯನ್ನು ವಿರೋಧಿಸಿದುದರಲ್ಲಿ ಅನೇಕ ಅರ್ಥಗಳಿವೆ. ಕರ್ನಾಟಕ ರೈತ ಸಂಘದಲ್ಲಿ, ಒಕ್ಕಲಿಗ ಮತ್ತು ಲಿಂಗಾಯಿತ ಜಾತಿಗೆ ಸೇರಿದವರು ಅಧಿಕ ಸಂಖ್ಯೆಯಲ್ಲಿದ್ದಾರೆ. ಇವರು ಒಂದಾದರೆ ಪ್ರಬಲ ರಾಜಕೀಯ ಶಕ್ತಿ ಉಂಟಾಗುತ್ತದೆ.

ಈ ಪ್ರಬಲ ರಾಜಕೀಯ ಶಕ್ತಿಯ ಎದುರು ಯಾವುದೇ ದುರ್ಬಲ ವರ್ಗವು ಸ್ವಾಭಿಮಾನದಿಂದ ತಲೆ ಎತ್ತುವುದು ಕಷ್ಟವಾಗುತ್ತದೆ. ಗೌಡ, ಜಮೀನ್ದಾರ ಹಳ್ಳಿಯ ಬಗ್ಗೆ

ಸರ್ಕಾರಕ್ಕೆ ನೀಡುವ ಮಾಹಿತಿ, ಅವನ ಸ್ವಾರ್ಥದಿಂದ ಮುಕ್ತವಾಗಿರುವುದಿಲ್ಲ ಎಂಬುದು ಲಂಕೇಶರ ನಿಲುವು. ತೇಜಸ್ವಿಯವರ ಲೇಖನ ರೈತ ಸಂಘಟನೆಗಳು ಯಾವ ಮಾರ್ಗದಲ್ಲಾದರೂ ತಮ್ಮ ಗುರಿ ಮುಟ್ಟಲಿ ಎನ್ನುವ ಉತ್ಸಾಹದಲ್ಲಿ ಸಮರ್ಥನೆಯ ದಾರಿ ಹಿಡಿದರೆ, ಲಂಕೇಶರ ಪ್ರತಿಕ್ರಿಯೆ ದಾರಿ ಮತ್ತು ಗುರಿಗಳೆರಡೂ ನಿರ್ಮಲವಾಗಬೇಕಿದೆ ಎಂಬ ಗಾಂಧೀ ತತ್ವದ ಹಿನ್ನೆಲೆಯಲ್ಲಿ ರೈತ ಸಂಘಟನೆಗಳ ಮಿತಿಯನ್ನು ವಿಷಾದದಿಂದ ದಾಖಲಿಸುತ್ತಾರೆ.

## ವಿಶಿಷ್ಟತೆಗಳು



೧. ಭಾರತೀಯ ಕೃಷಿ ರಂಗ ಆಧುನಿಕಗೊಂಡು ವಿಚಿತ್ರವಾದ ಸಂಕಷ್ಟಕ್ಕೆ ಒಳಗಾಗಿರುವುದನ್ನು ಗುರುತಿಸಿ ಲಂಕೇಶರು ಅದಕ್ಕೆ ಪರ್ಯಾಯವಾಗಿ ಪುಕುವೋಕಾನ ಕೃಷಿ ವಿಧಾನವನ್ನು ಮಂಡಿಸುತ್ತಾರೆ. ಭೂಮಿ ಮತ್ತು ಮನುಷ್ಯನ ಸಾವಯವ ಸಂಬಂಧ ಪುಕುವೋಕಾನಂತೆ ಲಂಕೇಶರಿಗೂ ಮುಖ್ಯವಾಗಿ ಕಂಡಿದೆ.

೨. ಜಾತಿ-ವರ್ಗಗಳನ್ನು ದಾಟಿದ ಸಾಮುದಾಯಿಕ ಚಳುವಳಿಯಾಗಿ ರೈತ ಚಳುವಳಿ ಬೆಳೆಯಬೇಕೆಂಬ ಅಭಿಪ್ರಾಯ ಲಂಕೇಶರದು.

೩. ರೈತರ ಸಮಸ್ಯೆಯನ್ನು ಆರ್ಥಿಕ ಸಂದರ್ಭದಲ್ಲಿಟ್ಟು ವಿಶ್ಲೇಷಿಸಿದ ಕಾರಣಕ್ಕಾಗಿ ಲಂಕೇಶರಿಗೆ ರೈತ ಸಂಘದ ಬಗ್ಗೆ ಮೆಚ್ಚುಗೆ ಇದೆ. ಆದರೆ ಗ್ರಾಮೀಣ ಪ್ರದೇಶದಲ್ಲಿ ರಾಜಕೀಯ ಮುಖಾಮುಖಿಗಳನ್ನು ರೈತ ಸಂಘ ಬದಲಿಸಲು ಸಾಧ್ಯವಾಗಿಲ್ಲ ಎಂಬ ವಿಷಾದವೂ ಇದೆ. ಈ ದೇಶದಲ್ಲಿ ಭೂಸ್ವಾಮ್ಯವು ಮೇಲು ವರ್ಗಕ್ಕೆ ಸೇರಿರುವುದರಿಂದ ರೈತ ಸಂಘಗಳಲ್ಲಿ ಇವರದೇ ಮುಖ್ಯ ಪಾಲು. ಹಾಗಾಗಿಯೇ ಜಾತಿ ವ್ಯವಸ್ಥೆಯಂತಹ ಅಮಾನುಷ ಪ್ರವೃತ್ತಿಯ ವಿರುದ್ಧ ಈ ಸಂಘಟನೆಗಳು ಚಕಾರ ಎತ್ತಿಲ್ಲ ಎಂಬುದು ಲಂಕೇಶರ ನಿಲುವು. ಈ ಸ್ಥಿತಿಯನ್ನು ಮೀರಿದಾಗ ಮಾತ್ರ ಗ್ರಾಮ ಸಮಾಜ ಹೊಸ ಸಂಸ್ಕೃತಿಯ ಕಡೆಗೆ ಚಲಿಸುತ್ತದೆ ಎಂಬುದು ಅವರ ನಿಲುವು.



೪. ಸರ್ಕಾರಗಳು ರೈತರ ಸಾಲ ಮನ್ನ ಬೆಳೆಗೆ ಬೆಂಬಲ ಬೆಲೆ ನಿಗದಿ ಇತ್ಯಾದಿ ಘೋಷಣೆಗಳಿಗಿಂತ ರೈತರಿಗೆ ಸಾಲದ ಅಗತ್ಯವೇ ಇಲ್ಲದಂತ ಸಾಮಾಜಿಕ, ಆರ್ಥಿಕ ವಾತಾವರಣವನ್ನು ನಿರ್ಮಿಸಬೇಕು ಎಂಬುದು ಲಂಕೇಶರ ಆಶಯ.

೫. ಶೂದ್ರ, ದಲಿತರ ಸಮಸ್ಯೆಗಳು ಕೇವಲ ಅವರವು ಮಾತ್ರವೇ ಅಲ್ಲ ಅವು ಇಡೀ ಸಮಾಜದ ಸಮಸ್ಯೆಗಳು ಎಂಬ ಚಿಂತನೆ ಮೂಡಿದಾಗ ಮಾತ್ರ ರೈತ ಸಂಘಗಳ ಚಳುವಳಿಗೆ ಹೊಸ ಅರ್ಥ ಸಾಧ್ಯ ಎಂಬುದು ಲಂಕೇಶರ ನಿಲುವು.

**ಅಧ್ಯಾಯ-೫ ರ ಅಡಿಟಿಪ್ಪಣಿಗಳು :**

೧. ಕುವೆಂಪು ಸಮಗ್ರ ಕಾವ್ಯ ಸಂಪುಟ-೧, ರೈತನ ದೃಷ್ಟಿ ಕವಿತೆ, ಪು.೫೪೯.

೨. ಲಂಕೇಶ್ ಪಿ., ಟೀಕೆ-ಟಿಪ್ಪಣಿ ಸಂಪುಟ-೧, ಪತ್ರಿಕಾ ಪ್ರಕಾಶನ, ಬೆಂಗಳೂರು, ೧೯೯೭, ಪು.೩೫೯.

೩. ಲಂಕೇಶ್ ಪಿ., ಟೀಕೆ-ಟಿಪ್ಪಣಿ ಸಂಪುಟ-೧, ಪತ್ರಿಕಾ ಪ್ರಕಾಶನ, ಬೆಂಗಳೂರು, ೧೯೯೭, ಪು.೧೧೦.

೪. ಲಂಕೇಶ್ ಪಿ., ಟೀಕೆ-ಟಿಪ್ಪಣಿ ಸಂಪುಟ-೧, ಪತ್ರಿಕಾ ಪ್ರಕಾಶನ, ಬೆಂಗಳೂರು, ೧೯೯೭, ಪು.೩೨೬.

೫. ಲಂಕೇಶ್ ಪಿ., ಟೀಕೆ-ಟಿಪ್ಪಣಿ ಸಂಪುಟ-೧, ಪತ್ರಿಕಾ ಪ್ರಕಾಶನ, ಬೆಂಗಳೂರು, ೧೯೯೭, ಪು.೩೨೭.

೬. ಲಂಕೇಶ್ ಪಿ., ಟೀಕೆ-ಟಿಪ್ಪಣಿ ಸಂಪುಟ-೧, ಪತ್ರಿಕಾ ಪ್ರಕಾಶನ, ಬೆಂಗಳೂರು, ೧೯೯೭, ಪು.೩೨೮-೩೨೯.

೭. ಲಂಕೇಶ್ ಪಿ., ಟೀಕೆ-ಟಿಪ್ಪಣಿ ಸಂಪುಟ-೧, ಪತ್ರಿಕಾ ಪ್ರಕಾಶನ, ಬೆಂಗಳೂರು, ೧೯೯೭, ಪು.೩೩೧.

೮. ಲಂಕೇಶ್ ಪಿ., ಟೀಕೆ-ಟಿಪ್ಪಣಿ ಸಂಪುಟ-೧, ಪತ್ರಿಕಾ ಪ್ರಕಾಶನ, ಬೆಂಗಳೂರು, ೧೯೯೭, ಪು.೩೩೨.

ಅಧ್ಯಾಯ : ಆರು

# ಸಮಕಾಲೀನ ಘಟನೆಗಳಿಗೆ ಪ್ರತಿಕ್ರಿಯೆ ಸಾಮಾಜಿಕ ಜವಾಬ್ದಾರಿಯ ಅನಾವರಣ

೧. ಸಮಕಾಲೀನ ರಾಜಕೀಯಕ್ಕೆ ವಿಷಾದಪೂರ್ಣ ಪ್ರತಿಕ್ರಿಯೆ.

೨. ವಿಕೇಂದ್ರಿಕರಣದ ಸಾರ್ವತ್ರಿಕ ನೆಲೆಗೆ ಒತ್ತಾಸೆ.

೩. ಭ್ರಷ್ಟ ಸಾಮಾಜಿಕ ವಾತಾವರಣದಲ್ಲಿ ಸಾಹಿತಿಯ ಪಾತ್ರ.

೪. ಜಾತಿ-ವರ್ಗಗಳನ್ನು ದಾಟಿದ ಸಾಮರಸ್ಯ.

೫. ಶರಣ ಮಾರ್ಗ.

೬. ಸಮಯ ಸಾಧಕ ರಾಜಕಾರಣದ ವಿಮರ್ಶೆ.

೭. ಮೀಸಲಾತಿಯ ಹಿನ್ನಲೆಯಲ್ಲಿ ಸಮಾಜಮುಖಿ ಚಿಂತನೆ.

೮. ಕನ್ನಡ ಚಳುವಳಿ ನಿರಂತರವಾದದ್ದು.

ಅಧ್ಯಾಯ–೬

# ಸಮಕಾಲೀನ ಘಟನೆಗಳಿಗೆ ಪ್ರತಿಕ್ರಿಯೆ : ಸಾಮಾಜಿಕ ಜವಾಬ್ದಾರಿಯ ಅನಾವರಣ

ತೀವ್ರವಾದ ಸಾಮಾಜಿಕ ಬದ್ಧತೆ ಇರುವ ಮನುಷ್ಯ ತನ್ನ ಕಾಲಘಟ್ಟದಲ್ಲಿ ನಡೆಯುವ ಯಾವುದೇ ಕ್ರೌರ್ಯಗಳಿಗೆ, ಹಿಂಸೆಗಳಿಗೆ ಪ್ರತಿಕ್ರಿಯಿಸದೆ ಪ್ರತಿಭಟಿಸದೆ ಇರಲು ಸಾಧ್ಯವಿಲ್ಲ. ಈ ರೀತಿಯಲ್ಲಿ ಪ್ರತಿಭಟಿಸುವುದು ಪ್ರಜ್ಞಾವಂತರ ಜವಾಬ್ದಾರಿಯೂ ಹೌದು. ನಮ್ಮದು ಜಾತ್ಯಾತೀತ ಸಮಾಜ. ಇಲ್ಲಿ ಸಂಪತ್ತಿನ ಕೇಂದ್ರಿಕರಣದಂತೆ, ವಿದ್ಯೆಯ ಕೇಂದ್ರಿಕರಣ ಸಹ ಇದೆ. ಈ ರೀತಿಯ ಕೇಂದ್ರಿಕರಣವನ್ನು ತಪ್ಪಿಸಲು ಸರ್ಕಾರ ಮೀಸಲಾತಿ ನೀತಿಯನ್ನು ರೂಪಿಸಿದೆ. ಆದರೆ ಸಂವಿಧಾನದತ್ತವಾದ ಮೀಸಲಾತಿಗೆ ಇಂದು ಕೆಲವು ವರ್ಗಗಳಿಂದ ವಿರೋಧವ್ಯಕ್ತವಾಗಿದೆ. ಮಂಡಲ ಆಯೋಗದ ಚರ್ಚೆಯ ಸಂದರ್ಭದಲ್ಲಿ ಆದ ಪ್ರತಿಭಟನೆಗಳು ಇದಕ್ಕೆ ಸಾಕ್ಷಿ. ಇಂತಹ ಸಂದರ್ಭದಲ್ಲಿ ಪ್ರಜ್ಞಾವಂತರು ಯಾವ ರೀತಿ ವರ್ತಿಸಬೇಕು ಎಂಬುದಕ್ಕೆ ಲಂಕೇಶರು ಮುಖ್ಯವಾದ ಉದಾಹರಣೆಯಾಗಿದ್ದಾರೆ. ಇತ್ತೀಚಿನ ದಿನಗಳಲ್ಲಿ ಸಂವಿಧಾನದ ರಕ್ಷಣೆ ಇದ್ದು ದಲಿತರ ಮೇಲೆ ನಡೆಯುತ್ತಿರುವ ದೈಹಿಕ ಹಲ್ಲೆಗಳು ಹೆಚ್ಚುತ್ತಿವೆ. ಇದರ ಪರಿಹಾರ ಹೇಗೆ ಸಾಧ್ಯ. ವಿಕೇಂದ್ರಿಕರಣ ಯಾವಾಗ ಅರ್ಥಪೂರ್ಣವಾಗುತ್ತದೆ. ಜಾತಿ–ವರ್ಗ ದಾಟಿದ ಸಾಮರಸ್ಯ ಕಟ್ಟುವ ಮಾರ್ಗ ಯಾವುದು ಇತ್ಯಾದಿ ಪ್ರಶ್ನೆಗಳಿಗೆ ಲಂಕೇಶರು ಪ್ರತಿಕ್ರಿಯಿಸಿದ ರೀತಿಯನ್ನು ಮುಂದಿನ ಉಪ ಆಶಯಗಳ ಮುಖಾಂತರ ಅಧ್ಯಯನ ಮಾಡಿದ್ದೇನೆ.

೧. ಸಮಕಾಲೀನ ರಾಜಕೀಯಕ್ಕೆ ವಿಷಾದಪೂರ್ಣ ಪ್ರತಿಕ್ರಿಯೆ.

೨. ವಿಕೇಂದ್ರಿಕರಣದ ಸಾರ್ವತ್ರಿಕ ನೆಲೆಗೆ ಒತ್ತಾಸೆ.

೩. ಭ್ರಷ್ಟ ಸಾಮಾಜಿಕ ವಾತಾವರಣದಲ್ಲಿ ಸಾಹಿತಿಯ ಪಾತ್ರ.

೪. ಜಾತಿ–ವರ್ಗಗಳನ್ನು ದಾಟಿದ ಸಾಮರಸ್ಯ.

೫. ಶರಣ ಮಾರ್ಗ.

೬. ಸಮಯ ಸಾಧಕ ರಾಜಕಾರಣದ ವಿಮರ್ಶೆ.

೭. ಮೀಸಲಾತಿಯ ಹಿನ್ನಲೆಯಲ್ಲಿ ಸಮಾಜಮುಖಿ ಚಿಂತನೆ.

೮. ಕನ್ನಡ ಚಳುವಳಿ ನಿರಂತರವಾದದ್ದು.

೧. ಸಮಕಾಲೀನ ರಾಜಕೀಯಕ್ಕೆ ವಿಷಾದಪೂರ್ಣ ಪ್ರತಿಕ್ರಿಯೆ :

ನಮ್ಮ ರಾಜಕಾರಣಿಗಳು ಅಧಿಕಾರವನ್ನು ಸ್ವೀಕರಿಸುವಾಗ ಪುರಾಣ ಗ್ರಂಥಗಳ ಮೇಲೆ ಆಣೆ ಮಾಡುತ್ತಾ ನಾನು ಯಾವುದೇ ಕಾರಣಕ್ಕೂ ಕರ್ತವ್ಯ ಭ್ರಷ್ಟರಾಗುವುದಿಲ್ಲ. ಪ್ರಾಮಾಣೀಕತೆಯಿಂದ ನಮ್ಮ ಕರ್ತವ್ಯ ನಿರ್ವಹಿಸಿ ಜನ ಸಾಮಾನ್ಯರ ಸಮಸ್ಯೆಗಳನ್ನು ಬಗೆಹರಿಸಿ ದೇಶದ ಸರ್ವತೋಮುಖ ಅಭಿವೃದ್ಧಿಗೆ ಶ್ರಮಿಸುತ್ತೇವೆಂದು ಪ್ರತಿಜ್ಞೆಯನ್ನು ಮಾಡುತ್ತಾರೆ. ಅಧಿಕಾರದ ಗದ್ದುಗೆ ಏರಿದಾಗ ತನ್ನ ಕರ್ತವ್ಯ ಪ್ರಜ್ಞೆಯನ್ನು ಮರೆತು ಕುರ್ಚಿಯನ್ನು ಬದಲಾಯಿಸದೆ, ಕುರ್ಚಿಗೆ ತಾವೇ ಬದಲಾಗುತ್ತಿರುವುದು ಗಾಂಧೀಯ ಈ ನಾಡಿನಲ್ಲಿ ರಾಜಕೀಯ ದುರಂತವೆಂದು ಹೇಳಬಹುದು.

ಇದನ್ನು ಸಿದ್ಧರಾಮಯ್ಯನವರು ತಮ್ಮ ''ರಾಜಕೀಯ ಗಾಥೆ'' ಎಂಬ ಕವನದಲ್ಲಿ ''ಕಣ್ಣು, ಕಿವಿ ಮತ್ತು ನೆನಪು ಕಳೆದುಕೊಂಡವರೆಂದು'' ರಾಜಕಾರಣಿಗಳನ್ನು ವಿಡಂಬಿಸಿದ್ದಾರೆ. ಕುಚ್ಚಿದೇವಿ ವಿಧವೆಯಾದದ್ದು ಎಂಬ ಲೇಖನದಲ್ಲಿ ನಮ್ಮ ರಾಜಕೀಯ ವ್ಯವಸ್ಥೆ ಜಮೀನ್ದಾರಿ ಪದ್ಧತಿಯ ಹಿಡಿತದಲ್ಲಿರುವುದನ್ನು ವಿಷಾಧದಿಂದ ಲಂಕೇಶರು ದಾಖಲಿಸುತ್ತಾರೆ." ವಿ.ಪಿ. ಸಿಂಗ್, ಆಯ್ಕೆಯಾಗಿ ಬಂದಿದ್ದ ಲೋಕಸಭಾ ಕ್ಷೇತ್ರವಾದ ಪತ್ತೇಪುರದ ಸತನ್ ಧರ್ಮಪುರ ಒಂದು ಹಳ್ಳಿ. ಈ ಹಳ್ಳಿಯಲ್ಲಿಯ ದಲಿತ ಜನಾಂಗದಲ್ಲಿ ಕುಚ್ಚಿದೇವಿ ಮತ್ತು ಧನರಾಜ್ ಎಂಬ ಒಂದು ಬಡ ಕುಟುಂಬ ಕೂಲಿ ಮಾಡಿ ಜೀವನ ಸಾಗಿಸುತ್ತಿದ್ದರು. ಕುಜ್ಜಿದೇವಿ ಜಮೀನ್ದಾರ ಅರ್ಜುನಸಿಂಗ್‌ನ ಜಮೀನಲ್ಲಿ ಕೆಲಸ ಮಾಡುತ್ತಿದ್ದಳು."[೧] ಇವಳ ಸೌಂದರ್ಯಕ್ಕೆ ಆಸೆ ಪಟ್ಟು ಅರ್ಜುನ್‌ಸಿಂಗ್ ಅತ್ಯಾಚಾರಕ್ಕೆ ಪ್ರಯತ್ನಿಸಿ ವಿಫಲನಾಗುತ್ತಾನೆ. ಹೆಂಡತಿ ಗಂಡನಿಗೆ ಅರ್ಜುನ್‌ಸಿಂಗ್‌ನ ವರ್ತನೆಯನ್ನು ತಿಳಿಸಿದಾಗ ಧನರಾಜ್ ಮತ್ತು ಅರ್ಜುನಸಿಂಗ್‌ನಿಗೆ ಜಗಳ ಉಂಟಾಗಿ ಶಾಂತವಾಗುತ್ತದೆ. ಕೆಲದಿನಗಳ ನಂತರ ಧನರಾಜ್‌ನನ್ನು ಅರ್ಜುನ್‌ಸಿಂಗ್ ಕಡೆಯವರು ಸೀಮೆಎಣ್ಣೆ ಸುರಿದು ಬೆಂಕಿ ಹಚ್ಚಿ ಸಾಯಿಸುತ್ತಾರೆ. ಸಿಂಗ್ ಈ ವಿಷಯ ಎಲ್ಲೂ ಹರಡದಂತೆ ನೋಡಿಕೊಳ್ಳುತ್ತಾರೆ. ಆದರೆ ಕುಜ್ಜಿದೇವಿ ಪತ್ತೇಪುರದ ಮಾಜಿ ಶಾಸಕ ಕೃಷ್ಣರಾವತ್‌ಗೆ ವಿಷಯ ತಿಳಿಸಿದಳು. ಈ ಘಟನೆ ಲೋಕಸಭೆಯಲ್ಲಿ ಪ್ರಸ್ತಾಪವಾಗಿ ಕಾಂಗ್ರೆಸ್ ಕಡೆಯವರು ವಿ.ಪಿ. ಸಿಂಗ್‌ನನ್ನು ಟೀಕಿಸಿದರು. ವಿ.ಪಿ. ಸಿಂಗ್ ಆ ಸ್ಥಳಕ್ಕೆ ಹೋಗಿ ವಿಚಾರಿಸಿ ನಿಜ ಸಂಗತಿಯನ್ನು ಮುಚ್ಚಿಟ್ಟು ಬೇರೆ ಕಾರಣ ತೋರಿಸಿದರು. ಕೊಲೆಗೀಡಾದ ಧನರಾಜ್ ಕುಡುಕ ಇವನ ಸಾವಿಗೆ ಕಾರಣ ಇಬ್ಬರು ಕುಡುಕರು. ಅರ್ಜುನಸಿಂಗ್ ನಿರಪರಾಧಿ ಎಂಬ ಪ್ರಚಾರ ಮಾಡಿ ವಿ.ಪಿ. ಸಿಂಗ್ ಕರ್ತವ್ಯಭ್ರಷ್ಟರಾದರು.

ಈ ಘಟನೆಯನ್ನು ಲಂಕೇಶರು ರಾಜಕಾರಣಿಗಳು ಹೇಗೆ ಜಮೀನ್ದಾರರ ಕೈಗೊಂಬೆಗಳಾಗಿದ್ದಾರೆ ಮತ್ತು ತನ್ನ ಜಾತಿಯವರಾದ ಠಾಕೂರರನ್ನು ರಕ್ಷಿಸುವ ಕೆಳಜಾತಿಯವರನ್ನು ತಿರಸ್ಕರಿಸುವುದನ್ನು ತುಂಬಾ ವಿಷಾದದಿಂದ ಹೇಳಿದ್ದಾರೆ. ಜಾತ್ಯಾತೀತತೆಯ

ಮರೆವು ದಲಿತರ ಶೋಷಿತರ ಮೇಲಿನ ಕ್ರೌರ್ಯ, ಅವರಿಗೆ ನ್ಯಾಯ ದೊರೆಯದ ಸ್ಥಿತಿ ಇತ್ಯಾದಿಗಳು ಲಂಕೇಶರ ಮನಸ್ಸನ್ನು ತೀವ್ರವಾಗಿ ಕೆರಳಿಸಿವೆ. ಅವನ್ನು ವಿಷಾದದಿಂದಲೆ ಅವರು ದಾಖಲಿಸುತ್ತಾರೆ. ಈ ರೀತಿಯ ಜಮೀನ್ದಾರರ ಹಿಡಿತದಿಂದ ಸರ್ಕಾರಿ ವ್ಯವಸ್ಥೆ ಬಿಡುಗಡೆ ಪಡೆದಾಗಲೇ ಸಮಾಜದ ಕೆಳವರ್ಗಕ್ಕೆ ಸಾಮಾಜಿಕ ನ್ಯಾಯ, ಸ್ವತಂತ್ರ್ಯದ ಅನುಭವ ಸಿಗಲು ಸಾಧ್ಯ ಎಂಬುದು ಲಂಕೇಶರ ಅಭಿಮತ.

**೨. ವಿಕೇಂದ್ರಿಕರಣ ಸಾರ್ವತ್ರಿಕ ನೆಲೆಗೆ ಒತ್ತಾಸೆ :**

ನಮ್ಮ ಪ್ರಜಾಪ್ರಭುತ್ವ ವ್ಯವಸ್ಥೆಯನ್ನ ಕೇಂದ್ರ ಮತ್ತು ರಾಜ್ಯಗಳೆಂದು ವಿಂಗಡಿಸಲಾಗಿದೆ. ಇಡೀ ದೇಶಕ್ಕೆ ಒಂದು ಕೇಂದ್ರ ಸರ್ಕಾರ ಆಯಾ ರಾಜ್ಯಗಳಿಗೊಂದು ರಾಜ್ಯ ಸರ್ಕಾರವಿರುತ್ತದೆ. ಈ ರಾಜ್ಯ ಸರ್ಕಾರಗಳಲ್ಲಿ ಗ್ರಾಮ ಪಂಚಾಯಿತಿ, ತಾಲ್ಲೂಕ್ ಪಂಚಾಯಿತಿ ಮತ್ತು ಜಿಲ್ಲಾ ಪಂಚಾಯಿತಿಗಳೆಂದು ಕೆಲವು ಅಧಿಕಾರಗಳನ್ನು ಹಂಚಿರುವ ವ್ಯವಸ್ಥೆ ಇದೆ. ಈ ಘಟಕಗಳಿಗೆ ಆರ್ಥಿಕ ಘಟಕವಾಗಿ ರಾಜ್ಯದಲ್ಲಿ ಹಣವನ್ನ ಪೂರೈಸುವ ಹೆಚ್ಚುವರಿ ತೆರಿಗೆ ಮುಂತಾದ ಮೂಲಗಳಿಂದ ಹಣವನ್ನ ಪಡೆಯುವ ಘಟಕವಿರುತ್ತದೆ. ರಾಜ್ಯ ಸರ್ಕಾರ ಕೇಂದ್ರ ಸರ್ಕಾರದ ಅಧೀನದಲ್ಲಿ ಕೆಲಸ ನಿರ್ವಹಿಸುತ್ತಿರುತ್ತದೆ. ಕೇಂದ್ರ ಸರ್ಕಾರ ಸರ್ವಾಧಿಕಾರಿಯಂತೆ ಕೆಲವು ರಾಜ್ಯಗಳಿಗೆ ಮಲತಾಯಿ ಧೋರಣೆಯನ್ನು ತೋರಿಸುತ್ತಾ ಕಡೆಗಣಿಸುತ್ತಿರುವುದನ್ನ ಲಂಕೇಶರು ಟೀಕಿಸುತ್ತಾರೆ. ಈ ಟೀಕೆಯ ಹಿಂದೆ ಈ ರೀತಿಯ ಮಲತಾಯಿ ಧೋರಣೆಗೆ ಮುಂದುವರಿದರೆ ಗಣತಂತ್ರ ವ್ಯವಸ್ಥೆ ವಿಚ್ಛಿದ್ರವಾಗಬಹುದೆಂಬ ಕಳವಳವಿದೆ.

ಈ ರೀತಿಯ ಸ್ಥಿತಿಯನ್ನ ಹೋಗಲಾಡಿಸಲು ಕೇಂದ್ರ ಮತ್ತು ರಾಜ್ಯ ಸರ್ಕಾರಗಳೆರೆಡೂ ಸ್ವಯಂ ಅಧಿಕಾರವನ್ನು, ಹೊಣೆಗಾರಿಕೆಯನ್ನ ಮತ್ತು ಸಮಾನ ಅವಕಾಶಗಳು ಸಿಗುವಂತಾಗಬೇಕು. ಆಗ ಮಾತ್ರ ರಾಜಕೀಯವಾಗಿ ಮತ್ತು ಆರ್ಥಿಕವಾಗಿ ಭದ್ರವಾಗಿ ಅಧಿಕಾರ ರಾಜ್ಯಗಳಲ್ಲಿ ನೆಲೆಗೊಳ್ಳುವುದು."[೨] ಆಡಳಿತ ವಿಕೇಂದ್ರಿಕರಣಕ್ಕೆ ಒಳಗಾದಾಗ ಕೆಲಸ ಕಾರ್ಯಗಳಲ್ಲಿ ದಕ್ಷತೆ ಮತ್ತು ಸ್ಪರ್ಧೆ ಉಂಟಾಗುತ್ತದೆ. ಆಗ ಅಧಿಕಾರವನ್ನ ಹಿಡಿಯುವರಿಗೆ ಅದರ ಬಗ್ಗೆ ಪ್ರೀತಿ ಮತ್ತು ಜವಾಬ್ದಾರಿ ಉಂಟಾಗಿ ಯಾವುದೇ ಅನ್ಯಾಯಗಳಿಗೆ ಅವಕಾಶವಿರುವುದಿಲ್ಲ. ಭಾಷಿಕವಾಗಿ ಎಲ್ಲಾ ಜನರಿಗೂ ಉದ್ಯೋಗ ದೊರೆಯುವಂತಾಗುತ್ತದೆ. ರಾಜ್ಯದಲ್ಲಿ ಕೈಗಾರಿಕೆಯಲ್ಲಿ ತಯಾರಾದ ವಸ್ತುಗಳಿಗೆ ಕೇಂದ್ರದಲ್ಲಿ ಸಮಾನ ಅವಕಾಶ ಇರುತ್ತದೆ. ಹೀಗೆ ಅಧಿಕಾರ ವಿಕೇಂದ್ರಿಕರಣದಿಂದ ಒಂದು ರಾಜ್ಯ ನಿರಂತರವಾಗಿ ಎಲ್ಲಾ ವಲಯದಲ್ಲಿಯೂ ಶ್ರೀಮಂತವಾಗತೊಡಗಿದಾಗ ಮಾತ್ರ ಆಯಾ ರಾಜ್ಯಗಳ ಭಾಷೆಯ ಬಳಕೆ ಸಹಜ ಮತ್ತು ಅನಿವಾರ್ಯವಾಗುತ್ತದೆ.

ಪ್ರತಿಯೊಂದು ರಾಜ್ಯಗಳಲ್ಲಿರುವ ಭಾಷೆ, ಸಂಸ್ಕೃತಿ, ಸಂಪ್ರದಾಯಗಳು ಉಳಿಯಲು ಸಹಾಯಕವಾಗುತ್ತದೆ. ಒಂದು ರಾಜ್ಯ ಅಭಿವೃದ್ಧಿಯನ್ನ ಹೊಂದಬೇಕಾದರೆ ಅಲ್ಲಿನ ಜನರಿಂದ ಜಲದವರೆವಿಗೂ ಎಲ್ಲವೂ ಮುಖ್ಯವಾಗುತ್ತವೆ. ಹೀಗೆ ಕೇಂದ್ರ ಮತ್ತು ರಾಜ್ಯ ಸರ್ಕಾರಗಳೆರಡೂ

ಸಮಾನ ಅವಕಾಶಗಳಿಂದ ಸಮಾನತೆಯ ಭಾರತ ನಿರ್ಮಾಣ ಸಾಧ್ಯ. ಜಾಗತೀಕರಣದಿಂದ ಎಷ್ಟೇ ಪ್ರಭಾವ ಉಂಟಾದರೂ ದೇಶಕ್ಕೆ ಯಾವುದೇ ಅಪಾಯ ಉಂಟಾಗದು ಎಂಬುದು ಲಂಕೇಶರ ಅಭಿಪ್ರಾಯ.

ಕೇಂದ್ರ ರಾಜ್ಯಗಳು ಅಧಿಕಾರಕ್ಕಾಗಿ ಒಂದನ್ನೊಂದು ಸಹಕರಿಸುವಂತಿರಬೇಕೆ ವಿನಃ ಪ್ರತಿಸ್ಪರ್ಧಿಯಾಗುವಂತಿರಬಾರದು. ಜೊತೆಗೆ ನಿಜವಾದ ವಿಕೇಂದ್ರೀಕರಣವೆನ್ನುವುದು ಆಡಳಿತ ಯಂತ್ರವನ್ನು ವಿಕೇಂದ್ರೀಕರಿಸುವುದರಿಂದ ಮಾತ್ರ ಸಾಧ್ಯವಾಗುವುದಿಲ್ಲ. ಆರ್ಥಿಕ ವಿಕೇಂದ್ರೀಕರಣವೇ ಆಡಳಿತಕ್ಕೆ ಬಹಳ ಮುಖ್ಯ. ಆರ್ಥಿಕ ಸ್ವಾಯತ್ತತೆ ಇಲ್ಲದೆ ಹೋದರೆ ವಿಕೇಂದ್ರೀಕರಣದ ಉದ್ದೇಶವೇ ವಿಫಲವಾಗುತ್ತದೆ. ಭಾರತದಂಥ ಬಹುಮುಖಿ ಸಂಸ್ಕೃತಿಯ, ವೈವಿಧ್ಯಮಯ ಭಾಷೆಗಳ ನಾಡಿನಲ್ಲಿ ಈ ವಿವಿಧತೆಗಳಿಗೆ ಧಕ್ಕೆಯಾಗದೆ, ಪ್ರತಿಸ್ಪರ್ಧಿಯಾಗದೆ ಬೆಳೆಯಬೇಕೆಂದರೆ ಆಡಳಿತದಂತೆಯೇ ಆರ್ಥಿಕ ವಿಕೇಂದ್ರೀಕರಣವು ಆಗಬೇಕೆಂಬುದು ಲಂಕೇಶರ ಅಭಿಮತ.

**೩. ಭ್ರಷ್ಟ ಸಾಮಾಜಿಕ ವಾತಾವರಣದಲ್ಲಿ ಸಾಹಿತಿಯ ಪಾತ್ರ :**

ಸಾಹಿತಿ ಸಂವೇದನ ಜೀವಿ ಸಮಾಜದಲ್ಲಿ ಉಂಟಾಗುತ್ತಿರುವ ಕೆಲವು ಸಾರ್ವಕಾಲಿಕ ಸಮಸ್ಯೆಗಳಿಗೆ ಸಾಹಿತಿಯಾದವನು ಮದ್ದನ್ನ ಕೊಡುತ್ತಿರಬೇಕು. ಇದು ಆತನ ಅತ್ಯಂತ ಜವಾಬ್ದಾರಿಯ ಮತ್ತು ಪ್ರಾಮಾಣಿಕ ಕೆಲಸ. ಪರಂಪರಾಗತವಾಗಿ ದೇಶದಲ್ಲಿ ಬೆಳೆದು ಬಂದಿರುವ ಕೆಲವು ಮೂಲಭೂತ ಸಮಸ್ಯೆಗಳಿಗೆ ಆಯಾ ಕಾಲದ ಕವಿಗಳು ಪರಿಹಾರವನ್ನು, ಸಲಹೆ, ಸೂಚನೆಗಳನ್ನು ನೀಡುತ್ತಾ ಸಾಗಿದ್ದಾರೆ. ಕೆಲವು ಪರಿಹಾರಗೊಂಡಿವೆ ಕೆಲವು ಹಾಗೇ ರೂಪಾಂತರಗೊಳ್ಳುತ್ತಿವೆ.

'ಮಾನವ ಜಾತಿ ತಾನೊಂದು ಒಲಂ' ಎಂದ ಪಂಪನಿಂದ ಕುವೆಂಪು ತನಕ ಸಮಾಜದಲ್ಲಿ ಇರುವ ಜಾತಿಯನ್ನ, ಜಾತಿಯ ಹೆಸರಿನಲ್ಲಾಗುತ್ತಿರುವ ಅನ್ಯಾಯ ಹಿಂಸೆಗಳನ್ನು ವಿರೋಧಿಸುತ್ತಲೇ ಜನರಿಗೆ ಅರಿವನ್ನ ಮೂಡಿಸುತ್ತಲೇ ಬಂದರು. ಜಾತಿಯಿಂದ ಅವಮಾನಕ್ಕೆ ಒಳಗಾದರು ಅಧಿಕಾರ ಸಿಕ್ಕಾಗ ತನ್ನ ಮತ್ತು ತನ್ನವರ ನೋವು ದುಃಖಗಳನ್ನು ಮರೆಯುತ್ತಿದ್ದಾರೆ. ಇತ್ತೀಚೆಗೆ ಮತಾಂತರಗಳ ಸಮಸ್ಯೆ ಹೆಚ್ಚಾಗುತ್ತಿದೆ. ಹಿಂದೂ, ಮುಸ್ಲಿಂ, ಕ್ರಿಶ್ಚಿಯನ್ ಧರ್ಮಗಳು ಬೇರೆ ಧರ್ಮೀಯರಿಗೆ ಹಣ, ಅಧಿಕಾರ ತೋರಿಸಿ ಮತಾಂತರ ಮಾಡುತ್ತಿರುವ ವಿಕೃತ ಘಟನೆಗಳು ಜರಗುತ್ತಿವೆ. ಮೀಸಲಾತಿಯನ್ನ ವಿರೋಧಿಸುತ್ತಾ ಪ್ರತಿಭಾವಂತರಿಗೆ ಅವಕಾಶವನ್ನ ಕಡಿಮೆ ಮಾಡುತ್ತಿದ್ದಾರೆ. ಕೆಲವರು ಕೇಂದ್ರಿಕೃತ ವ್ಯವಸ್ಥೆಯನ್ನ ಬಳಸಿಕೊಂಡು ಕೆಲವರು ಅಧಿಕಾರವನ್ನ ದುರುಪಯೋಗ ಮಾಡಿಕೊಳ್ಳುತ್ತಿದ್ದಾರೆ. ನೆರವು ಪರಿಹಾರಗಳು ನೆಪ ಮಾತ್ರವಾಗುತ್ತಿವೆ. "ಜಾತಿಯನ್ನೇ ಧರ್ಮವೆಂದು ತಿಳಿದು ಅದನ್ನ ಪ್ರೋತ್ಸಾಹಿಸುವವರ ಸಂಖ್ಯೆ ಹೆಚ್ಚಾಗುತ್ತಿದೆ."[೩]

ಈ ರೀತಿಯ ಗೊಂದಲಮಯ, ಘ್ರಷ್ಟ ವಾತಾವರಣದಲ್ಲಿ ಸಾಹಿತಿ ಅಥವಾ ಅವನ ಕೃತಿಗಳು ಅಸಹಾಯಕರಿಗೆ ಸ್ಫೂರ್ತಿಯಾಗಬೇಕು, ಪ್ರತಿಕಲಗೆ ನೆರಳಾಗಬೇಕು, ಸಮಾಜದ ಜಡ ಸಂಸ್ಥೆಗಳಿಗೆ ಬೆಳಕಾಗಬೇಕಾಗಿದೆ. ಎಲ್ಲರಿಗೂ ಜೀವ ತುಂಬಿ ಬದುಕಿನ ಬಗ್ಗೆ ಅದಮ್ಯ ಆತ್ಮವಿಶ್ವಾಸವನ್ನ ಮೂಡಿಸಬೇಕಾಗಿದೆ. ಸಾಹಿತ್ಯದಲ್ಲಿರುವ ಶಕ್ತಿ ಎಲ್ಲರಿಗೂ ದೊರೆಯಬೇಕಾಗಿರುವುದು ಇಂದು ಅನಿವಾರ್ಯ. ಸಾಹಿತ್ಯದಿಂದ ಒಂದು ಸಮುದಾಯ ಬದಲಾಗಿ, ಬೆಳವಣಿಗೆಯನ್ನು ಹೊಂದಿ ನಂತರ ಒಂದು ದೇಶವು ಸಹ ಅಭಿವೃದ್ಧಿಯನ್ನು ಹೊಂದಬಹುದಾಗಿದೆ. ಸಾಹಿತ್ಯವು ಆಗ ನಾಡಿನ ಸಾಂಸ್ಕೃತಿಕ ಮಹತ್ವವನ್ನ ಸಾಧಿಸಬಹುದು ಎಂಬ ನಿಲುವು ಲಂಕೇಶರದು.

ಒಂದು ವ್ಯವಸ್ಥೆ ಭ್ರಷ್ಟಗೊಂಡಾಗ ಅದರ ಪ್ರಜ್ಞೆಯಾದ ಸಾಹಿತಿ ಯಾವ ರೀತಿ ವರ್ತಿಸಬೇಕು ಎಂಬುದನ್ನು ಲಂಕೇಶರು ತೀವ್ರವಾಗಿ ಅನೇಕ ಕಡೆ ಧ್ಯಾನಿಸಿದ್ದಾರೆ. ಸಾಹಿತಿಯಾದವನು ಎಂದೂ ದುರ್ಬಲರ ಪರವಾಗಿ ಜಾತ್ಯಾತೀತವಾಗಿ, ಜೀವ ಸಂಸ್ಕೃತಿಯ ಪರವಾಗಿ ಉಳಿಯಬೇಕು ಎಂಬುದು ಅವರ ನಿಲುವು "ಬೆಂಕಿ ಇಡುವವರ ನಡುವೆ ದೀಪ ಹಚ್ಚುವ" ಕೆಲಸವನ್ನು ಸಾಹಿತಿಗಳು ಅನಿವಾರ್ಯವಾಗಿ ನಿರ್ವಹಿಸಬೇಕು ಎಂಬುದು ಅವರ ಅಭಿಪ್ರಾಯವಾಗಿದೆ.

**೪. ಜಾತಿ –ವರ್ಗಗಳನ್ನ ದಾಟಿದ ಸಾಮರಸ್ಯ :**

ವ್ಯಕ್ತಿಗೆ ಸಮಾಜದಲ್ಲಿ ಗೌರವ ಸ್ಥಾನ –ಮಾನಗಳು ದೊರೆಯುವುದು ಅವನ ಹುಟ್ಟಿನಿಂದಲ್ಲ ಅಥವಾ ಅವನ ಜಾತಿಯಿಂದಲ್ಲ. ತಾನು ಅನೇಕ ವಿಷಯಗಳಲ್ಲಿ ಪಾಂಡಿತ್ಯವನ್ನು ಗಳಿಸಿಕೊಂಡು ಅದರ ಅಹಂಕಾರದಿಂದ ಬೀಗುತ್ತಾ ಬೇರೆಯವರನ್ನ ಕೀಳಾಗಿ ಕಾಣುವುದು ಸಭ್ಯತೆಯ ಲಕ್ಷಣವಲ್ಲ. ಆದ್ದರಿಂದ ವ್ಯಕ್ತಿಗೆ ಕೆಲವು ಸಾಮಾಜಿಕ ಜವಾಬ್ದಾರಿಯುತ ಮೌಲ್ಯಗಳಿರಬೇಕಾದುದು ಅನಿವಾರ್ಯ ಮತ್ತು ಅತ್ಯಗತ್ಯವಾದುದು.

ಲಂಕೇಶರು ಗಣ್ಯರು – ಪೂಜ್ಯರು ಎಂಬ ಲೇಖನದಲ್ಲಿ ಸಮಾಜದಲ್ಲಿ ಗಣ್ಯರೆನಿಸಿಕೊಂಡು ಅಧಿಕಾರ, ಹಣ, ಅಹಂಕಾರದಿಂದ ಸ್ವಾರ್ಥಿಗಳಾಗಿ ಮೆರೆಯುತ್ತಿರುವವರ ಬಗ್ಗೆ ಕಟುವಾಗಿ ವಿರೋಧವನ್ನ ವ್ಯಕ್ತಪಡಿಸಿದ್ದಾರೆ. ಕೆಲವರು ತಮ್ಮಲ್ಲಿರುವ ಅಹಂಕಾರದ ಮಟ್ಟಕ್ಕೆ ವಿನಯವನ್ನು ಬೆಳೆಸಿಕೊಂಡಾಗ ಮಾತ್ರ ಅವರು ಗಣ್ಯರಾಗುವುದಕ್ಕೆ ಅರ್ಹರಾಗುತ್ತಾರೆ. ವ್ಯಕ್ತಿಯ ಗಣ್ಯತೆಯನ್ನು ದೇಹದ ಮಾನದಂಡದಿಂದ ಈವ ದೊಡ್ಡವ, ಸಣ್ಣವ ಎಂದು ಅಳೆಯುವುದಲ್ಲ. ಬಡವರು ತಮಗೆ ಬೇಕಾದ ಅಗತ್ಯಗಳನ್ನು ಪಡೆಯಲು ಕೆಲವು ತಪ್ಪುಗಳನ್ನು ಮಾಡಿದರೂ ಅವು ತಪ್ಪಾಗುವುದಿಲ್ಲ. ಆದರೆ ಯಾವುದೇ ಯೋಗ್ಯತೆಯಿಲ್ಲದವರು ಬೇರೆಯವರನ್ನು ಬಳಸಿಕೊಂಡು ಉನ್ನತ ಸ್ಥಾನಗಳನ್ನು ಸ್ವೀಕರಿಸುವುದು ಅಪರಾಧವಾಗುತ್ತದೆ."[೪] ಅನರ್ಹರು ಈ ರೀತಿ ಸ್ಥಾನ ಪಡೆದಾಗ, ಆ ಸ್ಥಾನಗಳು ಕಳಂಕಪ್ರಾಯವಾಗುತ್ತವೆ ಎಂಬುದು ಲಂಕೇಶರ ಅಭಿಪ್ರಾಯ.

ಡಾ. ಶ್ರೀನಿವಾಸಗೌಡ ಎಂಬ ನೇತ್ರತಜ್ಞನನ್ನು ಉದಾಹರಿಸುವುದರ ಮೂಲಕ ತಮ್ಮ ವಾದವನ್ನು ಸಮರ್ಥಿಸಿದ್ದಾರೆ. ಈತ ಹೆಸರನ್ನ ಮತ್ತು ಪದವಿಯನ್ನ ಪಡೆಯುವುದಕ್ಕಾಗಿ ಒಂದು ದಿನಕ್ಕೆ ನೂರಾಒಂದು ಕಣ್ಣಿನ ಆಪರೇಷನ್‌ಗಳನ್ನ ಮಾಡಿ ಗಣ್ಯನಾದವನು. ಇದು ಕೇವಲ ಸ್ವಪ್ರತಿಷ್ಠೆಯ ಕೆಲಸ. ಈ ಆಪರೇಷನ್‌ನಿಂದ ಲಾಭ ಪಡೆದವರು ಮಾತ್ರ ವಿರಳ. ಇವನು ರಾಜಕೀಯ ವ್ಯಕ್ತಿಗಳ ವಿಶ್ವಾಸವನ್ನು ಗಳಿಸಿ ಜಾತಿಯ ಹೆಸರಿನಿಂದ ತನ್ನೆಲ್ಲ ಅನ್ಯಾಯ, ಹಿಂಸೆಯನ್ನ ಮುಚ್ಚಿದ್ದಾರೆ. ಇಂತಹ ವ್ಯಕ್ತಿಗಳು ನಮ್ಮ ಮದ್ಯ ಇರುವ ಮನುಷ್ಯ ರೂಪದ ಮೃಗಗಳೆಂದಿದ್ದಾರೆ. ಕೇವಲ ಪದವಿಗಾಗಿ ಸಮಾಜದ ಸಾಮಾನ್ಯರನ್ನ ಶೋಷಿಸುತ್ತಾ, ಹಿಂಸೆಯನ್ನ ನೀಡುತ್ತಾ ಅನ್ಯಾಯ-ಅತ್ಯಾಚಾರಗಳನ್ನು ಎಸಗುತ್ತಿರುವ ಗಣ್ಯರೆಂದು ಪೂಜಿಸಲ್ಪಡುತ್ತಿರುವವರ ಬಗ್ಗೆ ಎಲ್ಲರೂ ಜಾಗೃತರಾಗಬೇಕು. ಈತನನ್ನ ನಾಯಕ ಎಂದು ಸಮಾಜ ಒಪ್ಪಬಾರದು. ಜನತೆಯಲ್ಲಿ ಅರಿವು ಉಂಟಾಗಿ ವಿರೋಧಿಸುವ ಮನೋಭಾವ ಬೆಳೆಯಬೇಕೆಂದು ಲಂಕೇಶರ ನಿಲುವು.

ಮನುಷ್ಯ ಅಹಂಕಾರದ ಸ್ಥಾನದಲ್ಲಿ ವಿನಯ ಬೆಳೆಸಿಕೊಳ್ಳಬೇಕು ಎಂಬ ಗಾಂಧೀಯವರ ತತ್ವ ಲಂಕೇಶರ ಮೇಲೆ ಅಪಾರ ಪ್ರಭಾವ ಬೀರಿದೆ. ಹಾಗೆಯೇ ಇಲ್ಲಿ ಅವರು 'ವಿನಯ' ಪೂರ್ಣ ವ್ಯಕ್ತಿತ್ವಕ್ಕೆ ಮಹತ್ವ ನಿಡುತ್ತಾರೆ. ಅಲ್ಲದೆ ಈ ಸಮಾಜದಲ್ಲಿ ಅಪಾಯಕ್ಕೆ ಸಿಕ್ಕಿದ ಮನುಷ್ಯ ಮತ್ತು ಜಾತಿಯನ್ನ ಬಯಸುವ ಮನುಷ್ಯರಿಬ್ಬರೂ ಜಾತಿಗೆ ಮೊರೆ ಹೋಗುವುದು ಅವರಲ್ಲಿ ವಿಷಾದವನ್ನು ಹುಟ್ಟಿಸಿದೆ. ಜಾತ್ಯಾತೀತ ತತ್ವಕ್ಕೆ ಈ ಮನೋಭಾವ ಅಡ್ಡಿಯಾಗುತ್ತದೆ ಎಂಬುದು ಅವರ ಅಭಿಪ್ರಾಯ,

**೫. ಶರಣ ಮಾರ್ಗ :**

೧೨ನೇ ಶತಮಾನದ ವಚನ ಚಳುವಳಿಯು 'ಕಾಯಕವೇ ಕೈಲಾಸ' ಎಂಬ ತತ್ವದ ಮೂಲಕ ಸ್ವಾವಲಂಬನೆಯ ಮಾರ್ಗವನ್ನು ತೋರಿಸಿ ಸಮಾಜದಲ್ಲಿ ಸಮಾನತೆಯ ಬೀಜವನ್ನು ಬಿತ್ತಿತು. ವಚನಕಾರರು ಎಲ್ಲರೂ ಪ್ರೀತಿ -ವಿಶ್ವಾಸದಿಂದ ಬಾಳುವ ದಾರಿಯನ್ನು ತೊರಿಸಿಕೊಟ್ಟಿದ್ದಾರೆ. ಆದರೆ ನಮ್ಮ ಇಂದಿನ ರಾಜಕಾರಣಿಗಳು ಹೇಗೆ ಅಧಿಕಾರ ದೊರೆತಾಗ ಕರ್ತವ್ಯ ದ್ರೋಹಿಗಳಾಗುತ್ತಿದ್ದಾರೆ ಎಂದು ದೇವರನ್ನು ಕುರಿತು ಎಂಬ ಲೇಖನದಲ್ಲಿ ಲಂಕೇಶರು ಚರ್ಚಿಸಿದ್ದಾರೆ. ದೇಶವನ್ನು ಆಳುವ ನಾಯಕರು ತಮ್ಮ ಕರ್ತವ್ಯ ಪ್ರಜ್ಞೆಯನ್ನ ಮರೆತು (ಸರ್ಕಾರಿ ಕೆಲಸ ದೇವರ ಕೆಲಸ) ದೇವರ ಹೆಸರಲ್ಲಿ ಧರ್ಮಸ್ಥಳ ಮುಂತಾದ ಧಾರ್ಮಿಕ ಸ್ಥಳಗಳಲ್ಲಿಯೇ ತಮ್ಮ ಅಮೂಲ್ಯ ಸಮಯ ಮತ್ತು ಹಣವನ್ನ ಖರ್ಚು ಮಾಡುತ್ತಿದ್ದಾರೆ. ರಾಜಕಾರಣಿಗಳೇ ಜನರಲ್ಲಿರುವ ಮೌಢ್ಯವನ್ನ ನಿವಾರಿಸಬೇಕಾದವರು. ಆದರೆ ಇಂತಹ ಕಟ್ಟು-ಪಾಡುಗಳಿಗೆ ಒಳಗಾಗುತ್ತಿರುವುದು ದುರಂತವೇ ಸರಿ ಎಂದು ಹೇಳುವ ಲಂಕೇಶರು ಪ್ಲೇಗ್ ನಿದರ್ಶನದ ಮೂಲಕ ಕರ್ತವ್ಯ ಪ್ರಜ್ಞೆಯನ್ನ ಗುರುತಿಸಿದ್ದಾರೆ. "ಪ್ಲೇಗ್ ಕಾಯಿಲೆ ಉಂಟಾಗಲು ಜನರ ಕೊಳಕುತನವೇ ಕಾರಣ ಯಾವುದೇ ದೇವರು ಅಥವಾ ಮೂಢನಂಬಿಕೆಯಲ್ಲ. ಈ ಲೇಖನದಲ್ಲಿ

ಕಂಡುಬರುವ ಡಾಕ್ಟರ್ ಕರ್ತವ್ಯಶೀಲ ವ್ಯಕ್ತಿಯಾಗಿ ಕಂಡುಬರುತ್ತಾನೆ.[೫] ದೇವರು ದೇವಸ್ಥಾನದಲ್ಲಿರುತ್ತಾನೆ ಎಂಬುದು ಕಲ್ಪನೆ ಅಥವಾ ಭ್ರಮೆಯಷ್ಟೇ. ಪ್ರತಿಯೊಬ್ಬರಿಗೂ ಕಾಯಕನಿಷ್ಠೆ ಇದ್ದಾಗ ಮಾತ್ರ ದೇವರು ನಮ್ಮಲ್ಲಿರುತ್ತಾನೆ ಎಂಬುದು ಕಾಯಕದ ಮಹತ್ವದ ಬಗ್ಗೆ ಲಂಕೇಶರು ಹೇಳುತ್ತಾರೆ.

ಮೌಢ್ಯವನ್ನ ತೊರೆದ, ಕಾಯಕ ನಿಷ್ಠೆ ಹೊಂದಿದ ವ್ಯಕ್ತಿಗಳಿಂದ ಮಾತ್ರ ಸಮಾಜಕ್ಕೆ ಬಿಡುಗಡೆ ಸಾಧ್ಯ ಎಂಬುದು ಲಂಕೇಶರ ಅಭಿಪ್ರಾಯ. ಇದನ್ನ ನಾನು 'ಶರಣ ಮಾರ್ಗ' ಎಂದು ಕರೆದಿದ್ದೇನೆ.

**೬. ಸಮಯ ಸಾಧಕ ರಾಜಕಾರಣದ ವಿಮರ್ಶೆ :**

ಭಾರತದ ಪ್ರಜಾಪ್ರಭುತ್ವ ರಾಜಕಾರಣ ವ್ಯವಸ್ಥೆಯಲ್ಲಿ ಅಧಿಕಾರವನ್ನ ಹಿಡಿಯುವವರಿಗೆ ಕೆಲವು ಮೂಲಭೂತ ಅರ್ಹತೆಗಳು ಇರಬೇಕು ಎಂಬುದು ಲಂಕೇಶರ ಆಪೇಕ್ಷೆ. ಒಬ್ಬ ರಾಜಕಾರಣಿ ಅಥವಾ ಉತ್ತಮ ನಾಯಕನಿಗೆ ನಾಯಕತ್ವದ ಸ್ಪಷ್ಟವಾದ ಅರಿವು ತನ್ನ ಹಣ ಸಾರ್ವಜನಿಕ ಹಣ ಧರ್ಮ ಸರ್ಕಾರ ಮತ್ತು ಆಡಳಿತದ ಕಲ್ಪನೆ ಇತ್ಯಾದಿಗಳ ಬಗ್ಗೆ ಸ್ಪಷ್ಟ ನಿಲುವು ಇರಬೇಕು ಎಂದು ಲಂಕೇಶರು ಭಾವಿಸುತ್ತಾರೆ.

ಲಂಕೇಶರು ರಾಜಕಾರಣಿಗಳು ಹೇಗೆ ಅಧಿಕಾರವನ್ನು ದುರುಪಯೋಗ ಪಡಿಸಿಕೊಂಡು ದೇಶದ ಅವನತಿಗೆ ಕಾರಣರಾಗುತ್ತಿದ್ದಾರೆ ಎಂದು ಒಬ್ಬ ಮಂತ್ರಿಯನ್ನು ಕುರಿತು ಎನ್ನುವ ಲೇಖನದಲ್ಲಿ ವಿವರಿಸಿದ್ದಾರೆ. ೧೮ನೇ ಶತಮಾನದ ಫ್ರಾನ್ಸ್‌ನಲ್ಲಿದ್ದ ಟ್ಯಾಲಿರ್‍ಯಾಂಡ್ ಕುಂಟನಾಗಿದ್ದರೂ ಚತುರನಾಗಿದ್ದನು. ತನ್ನಲ್ಲಿರುವ ಪ್ರತಿಭೆಯಿಂದ ಫ್ರಾನ್ಸ್‌ನಲ್ಲಿ ಮಂತ್ರಿ ಪದವಿಯನ್ನ ಸ್ವೀಕರಿಸಿದನು. ತನ್ನಲ್ಲಿರುವ ಅಧಿಕಾರ ಬಲದಿಂದ ನೆಪೋಲಿಯನ್‌ನನ್ನು ಪ್ರೋತ್ಸಾಹಿಸಿದನು. ಹುಂಬನಾಗಿರುವ ನೆಪೋಲಿಯನ್‌ನಿಗೆ ಟ್ಯಾಲಿರ್‍ಯಾಂಡನ್ ತಂತ್ರಗಳು ಅರ್ಥವಾಗುತ್ತಿರಲಿಲ್ಲ. "ತನ್ನ ದೇಶದ ಅಪಾರವಾದ ಹಣವನ್ನು ಬ್ಯಾಂಕ್‌ಗಳಲ್ಲಿಟ್ಟನು. ದೇಶ ದಿವಾಳಿಯಾಗುವಂತೆ ಮಾಡಿದನು. ಈತನ ಕೆಲಸಗಳಲ್ಲಿ ದೇಶಸೇವೆಯ ಪ್ರದರ್ಶನ ಮಾತ್ರ ಇರುತ್ತಿತ್ತು. ಕ್ರಾಂತಿ, ರಕ್ತಪಾತ, ಸರ್ವಾಧಿಕಾರ ಎಲ್ಲವನ್ನು ಅನುಭವಿಸಿದ ಅನೇಕ ಪಕ್ಷಗಳನ್ನು ಬದಲಾಯಿಸಿದ ಈತನು ನಾಯಕನ ಸಾಧನೆ ಮತ್ತು ಪತನದಂತೆ ಕಾಣುತ್ತಿದ್ದನು."[೬]

ಇಂಥ ಟ್ಯಾಲಿರ್‍ಯಾಂಡ್, ನೆಪೋಲಿಯನ್‌ರಂತಹ ಆಡಳಿತ, ವ್ಯಕ್ತಿಗಳ ದಾಖಲೆಗಳಿಂದ ಆ ದೇಶಗಳು ಇಂದು ಅಭಿವೃದ್ಧಿ ಹೊಂದಿದ ದೇಶಗಳಾಗುತ್ತಿವೆ. ಟ್ಯಾಲಿರ್‍ಯಾಂಡ್ ತರದವರು ಯುರೋಪಿನಲ್ಲೇ ಇಂದು ಸಿಗುವುದಿಲ್ಲ. ನಮ್ಮ ಏಷ್ಯಾದಲ್ಲಿ ಅನೇಕರಿದ್ದಾರೆ. ಆದ್ದರಿಂದ ನಾಯಕರ ಆಯ್ಕೆ ಅವರ ಕಾರ್ಯವೈಖರಿಯ ಬಗ್ಗೆ ಜನರಲ್ಲಿ ಜಾಗೃತಿ ಉಂಟಾಗಬೇಕಾಗಿದೆ. ಸಮರ್ಥ, ದಕ್ಷ ನಾಯಕರ ಅವಶ್ಯಕತೆ ಭಾರತದಂತಹ ದೇಶಗಳಿಗೆ ಇಂದು ಅವಶ್ಯಕ ಎಂದು ಸಮಯ ಸಾಧಕ ರಾಜಕಾರಣಿಗಳ ಬಗ್ಗೆ ವಿಂಡಬನೆಯನ್ನು ಮಾಡಿದ್ದಾರೆ.

ಒಬ್ಬ ಟ್ಯಾಲಿರ್ಯಾಂಡ್ ಮಾಡಿದ ಅನಾಹುತದಿಂದ ಫ್ರಾನ್ಸ್‌ಗೆ ಉಂಟಾದ ಆಘಾತಗಳ ಬಗ್ಗೆ ಲಂಕೇಶ್ ಹೇಳುವಾಗಲೇ ಅಂಥ ಅನೇಕ ಜನ ನಮ್ಮಲ್ಲಿರುವ ಬಗ್ಗೆ ಸೂಕ್ಷ್ಮ ಎಚ್ಚರಿಕೆ ಹೇಳುತ್ತಾರೆ. ಇಂಥ ದೇಶ ಭಕ್ತಿಯ ನಾಟಕವಾಡುವ ಗೋಸುಂಬೆಗಳ ಬಗ್ಗೆ ಜನರಲ್ಲಿ ಎಚ್ಚರಿಕೆ ಮೂಡಬೇಕೆಂಬುದು ಲಂಕೇಶರ ಆಪೇಕ್ಷೆ.

**೭. ಮೀಸಲಾತಿಯ ಹಿನ್ನೆಲೆಯಲ್ಲಿ ಸಮಾಜಮುಖಿ ಚಿಂತನೆ :**

ಲಂಕೇಶರು ಮೀಸಲಾತಿಯ ಪರವಾದ ಅಭಿಪ್ರಾಯವನ್ನು ಹೊಂದಿದ್ದಾರೆ. "ಸಮಾಜದ ಮೇಲ್ವರ್ಗದವರು ಆರ್ಥಿಕ ಬೆಂಬಲ, ಸಾಮಾಜಿಕ ಬೆಂಬಲವಿರುವವರು ತೊಂಬತ್ತು ಅಂಕಗಳನ್ನು ತೆಗೆದುಕೊಳ್ಳುವುದು ಮುಖ್ಯವಲ್ಲ. ಆದರೆ ಯಾವುದೇ ಸೌಲಭ್ಯವಿಲ್ಲದೆ ದಲಿತನೊಬ್ಬ ಐವತ್ತು ಅಥವಾ ಅದಕ್ಕಿಂತ ಹೆಚ್ಚು ಅಂಕಗಳನ್ನು ಗಳಿಸುವುದು ಕಷ್ಟದಾಯಕ ಮತ್ತು ಅತಿಮುಖ್ಯವಾದುದು."[೭] ಹರಿಜನರು ಶಾಲೆಯನ್ನ ಪ್ರವೇಶಿಸಲು ಸಾಧ್ಯವಾಗದ ಸ್ಥಿತಿ ಇರುವಾಗ ಹಿಂದುಳಿದ ಕೆಲವು ಪ್ರತಿಭಾವಂತರಿಗೆ ಸರ್ಕಾರ ಮೀಸಲಾತಿಯನ್ನು ಕೊಡುತ್ತಿರುವುದು ಉತ್ತಮ ಮಾರ್ಗದಂತಿದೆ ಎಂದಿದ್ದಾರೆ.ಈ ಮೀಸಲಾತಿಯಿಂದ ಮೇಲ್ವರ್ಗದ ಕೆಲವು ಪ್ರತಿಭಾವಂತರಿಗೆ ಅನ್ಯಾಯವಾಗುತ್ತಿದೆ. ಆದರೆ ಮೀಸಲಾತಿಯ ಹೆಸರಿಂದಲಾದರೂ ನಾವು ಸಮಾಜದಲ್ಲಿರುವ ವರ್ಗ–ವರ್ಣಗಳೆಂಬ ಬಿರುಕುಗಳನ್ನು ಸ್ವಲ್ಪವಾದರೂ ಜೋಡಿಸುವ, ಸಾಮಾಜಿಕ ಸಮಾನತೆಯನ್ನು ತರುತ್ತಿರುವ ಸರ್ಕಾರದ ಯೋಜನೆಯು ಸ್ವಾಗತಾರ್ಹವಾದುದೆಂದಿದ್ದಾರೆ ಇದರಿಂದ ಸಾಮಾಜಿಕ ಬಾಧ್ಯತೆಯನ್ನು ಸಾಧಿಸಿದಂತಾಗುತ್ತದೆ. ಗಾಂಧೀ ಬಸವಣ್ಣನವರ ಆಸೆಯನ್ನ ಸ್ವಲ್ಪವಾದರೂ ಈಡೇರಿಸದಂತಾಗುತ್ತದೆ ಎಂಬುದು ಲಂಕೇಶರ ಸ್ಪಷ್ಟ ನಿಲುವು.

ಮಂಡಲ ಆಯೋಗದ ಜಾರಿ ಸಂದರ್ಭದಲ್ಲಿ ಆದ ಪ್ರತಿಭಟನೆಯ ಸಂದರ್ಭದಲ್ಲಿ ಬರೆದ ಲೇಖನ ಇದು ಎಂಬುದನ್ನು ಗಮನಿಸಿದರೆ ಇದರ ಮಹತ್ವ ತಿಳಿಯುತ್ತದೆ. ಮೀಸಲಾತಿಯ ಕ್ರಮವು ಪ್ರತಿಭಾವಂತ ವರ್ಗಕ್ಕೆ ಮಾಡುವ ಅನ್ಯಾಯ ಎಂದು ಕುಪಿತರಾದ ಯುವವರ್ಗಕ್ಕೆ ಸಾಮಾಜಿಕ ನ್ಯಾಯದ ಪರಿಕಲ್ಪನೆಯನ್ನು ಹೇಳುವ ಈ ಲೇಖನ ಅವರ ಸಾಮಾಜಿಕ ಜವಾಬ್ದಾರಿಯ ಅನಾವರಣವನ್ನು ಗುರುತಿಸಲು ಮಹತ್ವದ್ದಾಗಿದೆ.

**೮. ಕನ್ನಡ ಚಳುವಳಿ ನಿರಂತರವಾದದ್ದು :**

ಲಂಕೇಶರು ಒಂದು ನಾಡಹಬ್ಬದ ಪತ್ರ ಎಂಬ ಲೇಖನದಲ್ಲಿ ಒಂದು ಜನಾಂಗದ ಪ್ರಧಾನ ಭಾಷೆಯು ಜೀವಂತವಾಗಿ ಉಳಿಯಬೇಕಾದರೆ ಆ ಭಾಷೆಯನ್ನು ಅಲ್ಲಿನ ಜನರು ಬೇರೆ ಯಾವುದೇ ಭಾಷೆಗಳ ಒತ್ತಡ ಉಂಟಾದರೂ ಸಹ ಆ ಒತ್ತಡಗಳಿಗೆ ಮಣಿಯದೆ ಆತ್ಮವಿಶ್ವಾಸದಿಂದ ಬಳಸಿದಾಗ ಮಾತ್ರ ಒಂದು ಸಮುದಾಯದ ಭಾಷೆಯು ಉಳಿಯುತ್ತದೆ. ಇಂದಿನ ಜಾಗತೀಕರಣದಿಂದ ಅನೇಕ ಭಾಷೆಗಳು ನಶಿಸುತ್ತಿರುವ ಮುನ್ಸೂಚನೆಗಳು ಕಾಣುತ್ತಿವೆ. ಈ ಸಾಲಿನಲ್ಲಿ ಕನ್ನಡವು ಸಹ ನಿಂತಿದೆ ಎಂಬುದು ಲಂಕೇಶರ ಅಭಿಪ್ರಾಯ.

ಅತ್ಯಂತ ಪ್ರಾಚೀನ ಭಾಷೆಗಳ ಸಾಲಿನಲ್ಲಿರುವ ಕನ್ನಡಕ್ಕೆ ಇಂತಹ ಸ್ಥಿತಿಯು ಒದಗಿರುವುದು ನಿಜಕ್ಕೂ ವಿಪರ್ಯಾಸವೇ ಸರಿ.

**ಕನ್ನಡ ಭಾಷೆಯು ನಶಿಸುತ್ತಿರುವುದಕ್ಕೆ ಲಂಕೇಶರು ಕೊಡುವ ಕಾರಣಗಳು :**

೧. ಪ್ರತಿಯೊಬ್ಬ ಕನ್ನಡಿಗನಿಗೂ ತಾನು ಮತ್ತು ತನ್ನ ಭಾಷೆ ಕೀಳೆಂಬ ದೃಢ ವಿಶ್ವಾಸವಿದೆ.

೨. ಬೇರೆ-ಭಾಷೆಗಳ ಬಗ್ಗೆ ಪ್ರೀತಿ ಹೆಚ್ಚಾಗುತ್ತಿರುವುದು.

೩. ಬೇರೆಯವರಿಗೆ ಕನ್ನಡ ಬರುವುದಿಲ್ಲವೆಂಬ ಭಾವನೆ.

೪. ಬೇರೆಯವರು ಕನ್ನಡವನ್ನು ಕಡೆಗಣಿಸುತ್ತಿದ್ದರೂ ಕನ್ನಡಿಗನಿಗೆ ಆದರ ಅರಿವಿಲ್ಲ.

೫. ಬೆಂಗಳೂರಿನ ಮುಖ್ಯ ಖಾಸಗೀ ಕಾರ್ಖಾನೆಗಳ ಅಂಗಡಿಗಳ ನಾಮಫಲಕಗಳು ಕನ್ನಡದಲ್ಲಿಲ್ಲ.

೬. ಪಠ್ಯ ಪುಸ್ತಕಗಳಲ್ಲಿಯೇ ಕನ್ನಡದ ಬಗ್ಗೆ ಭಯ, ತಾತ್ಸಾರ ಉಂಟಾಗುತ್ತದೆ.

೭. ಬೆಂಗಳೂರಿನ ಕಬ್ಬನ್ ಪಾರ್ಕ್‌ನಲ್ಲಿ ಬೇರೆ ಬೇರೆ ಭಾಷೆಯೇ ತುಂಬಿದೆ.

**ಕನ್ನಡ ಭಾಷೆಯು ಅಭಿವೃದ್ಧಿಯ ಕ್ರಮಗಳು ಲಂಕೇಶರು ಹೇಳಿದಂತೆಯೆ :**

೧. ಇಲ್ಲಿನ ಎಲ್ಲಾ ಕಲಾವಿದರು, ಕಾರ್ಮಿಕರು, ಉದ್ಯಮಿಗಳು ಮತ್ತು ವಿದ್ಯಾರ್ಥಿಗಳು ಇವರೆಲ್ಲರ ಮೂಲಕ ಕನ್ನಡ ಬೆಳೆಯಬೇಕು.

೨. ದೇಶದ ಬೇರೆ – ಬೇರೆ ಭಾಗದಲ್ಲಿ ನಿವೃತ್ತರಾದವರು ಬೆಂಗಳೂರಿನಲ್ಲಿ ನೆಲೆಸುತ್ತಿದ್ದಾರೆ ಇವರಿಗೆ ಇಲ್ಲಿನ ಭಾಷೆ, ಸಂಸ್ಕೃತಿ ಅನಿವಾರ್ಯವಾಗಬೇಕು.

೩. ರಾಜ್ಯದ ಎಲ್ಲಾ ವ್ಯವಹಾರಗಳು ಕನ್ನಡದಲ್ಲಿ ನಡೆಯುವಂತೆ ಸರ್ಕಾರ ಶಾಸನವನ್ನು ಮಾಡಬೇಕು.

೪. ಪ್ರತಿಯೊಬ್ಬ ಕನ್ನಡಿಗನೂ ಕನ್ನಡದಲ್ಲಿಯೇ ಮಾತನಾಡಬೇಕು.

೫. ಎಲ್ಲರಿಗೂ ಮೊದಲು ಅವರವರ ಭಾಷೆಯ ಬಗ್ಗೆ ಆತ್ಮವಿಶ್ವಾಸ ಬೇಕು.

ಕನ್ನಡ ಭಾಷೆಯು ಹಿಂದುಳಿಯುವಿಕೆಗೆ ಕಾರಣಗಳನ್ನು ಕಂಡುಕೊಂಡ ಲಂಕೇಶರು ಅದಕ್ಕೆ ಪರಿಹಾರಗಳನ್ನು ಮೇಲಿನಂತೆ ಸೂಚಿಸಿದ್ದಾರೆ. ಭಾಷೆಯ ಬಗ್ಗೆ ಪ್ರೀತಿ, ಅರಿವು, ಅದು ಉಳಿಯಬೇಕು ಎಂಬ ಛಲ ಭಾಷಿಕರಲ್ಲಿ ಮೂಡಿದಾಗ ಮಾತ್ರ ಅದು ಉಳಿಯುತ್ತದೆ ಎಂಬುದು ಅವರ ಒಟ್ಟಾರೆ ನಿಲುವು. ಈ ರೀತಿಯ ನಿಲುವನ್ನು ಮೂಡಿಸಲು ಬೇಕಾದ ಪರಿಸರವನ್ನು ಸರ್ಕಾರಗಳು ನಿರ್ಮಿಸಬೇಕು ಎಂಬುದು ಅವರ ಆಗ್ರಹವಾಗಿದೆ. ಇಂದಿನ ದಿನಗಳಲ್ಲಿ ಯಾವ ಭಾಷೆಯು ಭಾಷಿಕ ತಂತ್ರಜ್ಞಾನವನ್ನು ಬೆಳೆಸಿಕೊಳ್ಳುತ್ತದೆಯೋ ಅಂಥ ಭಾಷೆ ಮಾತ್ರ ಸಮರ್ಥವಾಗಿ ಉಳಿಯಬಲ್ಲದು.

**ವಿಶಿಷ್ಟತೆಗಳು**

೧. ಸ್ವಾತಂತ್ರ ನಂತರವು ಭಾರತೀಯ ರಾಜಕೀಯ ವ್ಯವಸ್ಥೆ ಜಮೀನ್ದಾರರ ಹಿಡಿತದಲ್ಲಿರುವುದು. ಇದರಿಂದಾಗಿ ದಲಿತ ಶೋಷಿತರ ಮೇಲೆ ಹಲ್ಲೆ ಕಾರ್ಯಗಳು ಹಚ್ಚಿರುವುದು ಲಂಕೇಶರಲ್ಲಿ ವಿಷಾದವನ್ನು ಹುಟ್ಟಿಸುತ್ತದೆ. ಆಡಳಿತ ವ್ಯವಸ್ಥೆ ಈ ರೀತಿಯ ಹಿಡಿತದಿಂದ ಬಿಡುಗಡೆ ಪಡೆದಾಗ ಮಾತ್ರ ಕೆಳವರ್ಗಕ್ಕೆ ಸಾಮಾಜಿಕ ನ್ಯಾಯ ಸ್ವಾತಂತ್ರ್ಯದ ಅನುಭವ ಉಂಟಾಗಲು ಸಾಧ್ಯ ಎಂಬುದು ಲಂಕೇಶರ ನಿಲುವು.

೨. ಭಾರತದಂತಹ ವಿಶಾಲ ಬಹುಮುಖಿ ಸಂಸ್ಕೃತಿಯ ದೇಶ ತನ್ನ ಅನನ್ಯತೆಯನ್ನು ಉಳಿಸಿಕೊಳ್ಳಬೇಕೆಂದರೆ ವಿಕೇಂದ್ರಿಕರಣ ಸರಿಯಾದ ದಾರಿ ಎಂಬುದು ಲಂಕೇಶರ ನಿಲುವು. ಈಗ ನಮ್ಮಲ್ಲಿ ವಿಕೇಂದ್ರಿಕರಣ ವ್ಯವಸ್ಥೆ ಜಾರಿಯಲ್ಲಿದ್ದರೂ ಅದು ಕೇವಲ ಆಡಳಿತಕ್ಕೆ ಸಂಬಂಧಿಸಿದ್ದು ಮಾತ್ರ. ಇದರ ಜೊತೆಯಲ್ಲಿಯೇ ಆರ್ಥಿಕ ವಿಕೇಂದ್ರೀಕರಣವು ಸಾಧ್ಯವಾದಾಗ ಮಾತ್ರ ರಾಜ್ಯಗಳು ಪ್ರತಿಸ್ಪರ್ಧಿಗಳಾಗದೆ ಸಹಕಾರಿಗಳಾಗುತ್ತವೆ ಎಂಬುದು ಲಂಕೇಶರ ಭಾವನೆ.

೩. ಸಾಹಿತಿಯಾದವನು ಜಾತ್ಯಾತೀತವಾಗಿ ದುರ್ಬಲರ ಪರವಾಗಿ ಜೀವ ಸಂಸ್ಕೃತಿಯ ರಕ್ಷಣೆಯ ಪರವಾಗಿ ನಿಲ್ಲಬೇಕು ಎಂಬುದು ಲಂಕೇಶರ ಅಪೇಕ್ಷೆ.

೪. ಮನುಷ್ಯನ ಅಹಂಕಾರದ ಸ್ಥಾನದಲ್ಲಿ ವಿನಯ ಮೂಡಿದಾಗ ಮಾತ್ರ ಆ ವ್ಯಕ್ತಿ ಗಣ್ಯನೂ, ಪೂಜ್ಯನೂ ಆಗುತ್ತಾನೆ ಎಂಬುದು ಲಂಕೇಶರ ಅಭಿಪ್ರಾಯ.

೫. ಮೌಢ್ಯವನ್ನು ತೊರೆದ ಕಾಯಕ ನಿಷ್ಠೆ ಹೊಂದಿದ ವ್ಯಕ್ತಿಗಳಿಂದ ಮಾತ್ರ ಸಮಾಜಕ್ಕೆ ಬಿಡುಗಡೆ ಸಾಧ್ಯ ಎಂಬುದು ಲಂಕೇಶರ ನಿಲುವು.

೬. ದೇಶ ಭಕ್ತಿಯ ನಾಟಕವಾಡುವ ಗೋಸುಂಬೆ ರಾಜಕಾರಣಿಗಳ ಬಗ್ಗೆ ವಿಡಂಬಿಸುತ್ತಲೇ ಲಂಕೇಶರು ಸಮರ್ಥ, ದಕ್ಷ ನಾಯಕರ ಅವಶ್ಯಕತೆ ಈ ದೇಶಕ್ಕೆ ಇದೆ ಎಂಬುದನ್ನು ಪ್ರತಿಪಾದಿಸುತ್ತಾರೆ.

೭. ಮೀಸಲಾತಿಯ ಸಮರ್ಥನೆಯನ್ನು ಮಾಡುತ್ತಾ ಅದು ಮುಂದುವರಿದಾಗ ಮಾತ್ರ ಗಾಂಧೀ, ಬಸವಣ್ಣನವರ ಆಸೆ ಈಡೇರಿಸಿದಂತಾಗುತ್ತದೆ ಎಂಬ ಅಭಿಪ್ರಾಯವನ್ನು ಲಂಕೇಶರು ದಾಖಲಿಸುತ್ತಾರೆ. ಇದು ಕೇವಲ ಗಾಂಧೀ ಬಸವಣ್ಣನವರ ತತ್ವದ ಪರಿಪಾಲನೆ ಅಷ್ಟೇ ಅಲ್ಲ ನಮ್ಮೆಲ್ಲರ ಸಾಮಾಜಿಕ ಬಾಧ್ಯತೆ ಎಂಬುದು ಲಂಕೇಶರ ನಿಲುವು.

**ಅಧ್ಯಾಯ-೬ ಅಡಿಟಿಪ್ಪಣಿಗಳು :**

೧. ಲಂಕೇಶ್ ಪಿ., ಟೀಕೆ-ಟಿಪ್ಪಣಿ-೧, ಪತ್ರಿಕಾ ಪ್ರಕಾಶನ, ಬೆಂಗಳೂರು, ೧೯೯೭, ಪು.೪೫೧.

೨. ಲಂಕೇಶ್ ಪಿ., ಟೀಕೆ-ಟಿಪ್ಪಣಿ-೧, ಪತ್ರಿಕಾ ಪ್ರಕಾಶನ, ಬೆಂಗಳೂರು, ೧೯೯೭, ಪು.೪೩೫.

೩. ಲಂಕೇಶ್ ಪಿ., ಟೀಕೆ-ಟಿಪ್ಪಣಿ-೧, ಪತ್ರಿಕಾ ಪ್ರಕಾಶನ, ಬೆಂಗಳೂರು, ೧೯೯೭, ಪು.೪೩೮.

೪. ಲಂಕೇಶ್ ಪಿ., ಟೀಕೆ-ಟಿಪ್ಪಣಿ-೨, ಪತ್ರಿಕಾ ಪ್ರಕಾಶನ, ಬೆಂಗಳೂರು, ೧೯೯೭, ಪು.೪೦೭.

೫. ಲಂಕೇಶ್ ಪಿ., ಟೀಕೆ-ಟಿಪ್ಪಣಿ-೧, ಪತ್ರಿಕಾ ಪ್ರಕಾಶನ, ಬೆಂಗಳೂರು, ೧೯೯೭, ಪು.೯೫.

೬. ಲಂಕೇಶ್ ಪಿ., ಟೀಕೆ-ಟಿಪ್ಪಣಿ-೨, ಪತ್ರಿಕಾ ಪ್ರಕಾಶನ, ಬೆಂಗಳೂರು, ೧೯೯೭, ಪು.೨೬೯.

೭. ಲಂಕೇಶ್ ಪಿ., ಟೀಕೆ-ಟಿಪ್ಪಣಿ-೧, ಪತ್ರಿಕಾ ಪ್ರಕಾಶನ, ಬೆಂಗಳೂರು, ೧೯೯೭, ಪು.೧೬೯.

## ಅಧ್ಯಾಯ-೭

# ಉಪಸಂಹಾರ

ಲಂಕೇಶರ ಟೀಕೆ ಟಿಪ್ಪಣಿಗಳಲ್ಲಿ ಆಯಾ ಕಾಲದ ರಾಜಕೀಯ ಘಟನೆಗಳಿಗೆ ಪ್ರತಿಕ್ರಿಯಿಸಿರುವ ಬರಹಗಳದ್ದೆ ಸಿಂಹಪಾಲು. ಆದರೆ ಈ ಬರಹಗಳು ಅಂದಂದಿನುಚಿತಕ್ಕೆ ಪಾಡಿದ ಹಾಡುಗಳಾದರೂ ಅವುಗಳ ಹಿಂದೆ ಒಂದು ಏಕಸೂತ್ರತೆ ಇದೆ. ಈ ಏಕಸೂತ್ರತೆ ಬಂದಿರುವುದು ರಾಜಕೀಯ ನೈತಿಕತೆಯಿಂದ. ಪ್ರಜಾಪ್ರಭುತ್ವ ರಾಷ್ಟ್ರಗಳಲ್ಲಿ ಜನಾಭಿಪ್ರಾಯ ರೂಪಿಸುವುದು ಬಹಳ ಮುಖ್ಯವಾದ ಕೆಲಸ. ಪತ್ರಿಕೆಗಳು, ಸಮೂಹಮಾಧ್ಯಮಗಳು ಈ ಕೆಲಸವನ್ನು ನಿರ್ವಹಿಸುತ್ತವೆ. ಲಂಕೇಶರು ತಮ್ಮ ಪತ್ರಿಕೆಯಲ್ಲಿ ರೂಪಿಸಿದ ಜನಾಭಿಪ್ರಾಯ ಕೇವಲ ರಾಜಕೀಯ ಪ್ರಬುದ್ಧತೆಯನ್ನು ಕೇಂದ್ರವಾಗಿಸಿಕೊಂಡಿರಲಿಲ್ಲ. ಬದಲಾಗಿ ಒಂದು ಸಂಸ್ಕೃತಿ ರೂಪಿಕೆಯನ್ನು ನಿರ್ಮಿಸಿ ಸಾಂಸ್ಕೃತಿಕ ರಾಜಕಾರಣವನ್ನು ರೂಪಿಸುವ ಉಪಾಯವನ್ನು ಹೊಂದಿತ್ತು. ಅದು ರೂಪಿಸಿದ ರಾಜಕೀಯ ಪ್ರಬುದ್ಧತೆ, ಮತ್ತು ಸಾಂಸ್ಕೃತಿಕ ರಾಜಕಾರಣದ ಹಿಂದೆ ಗಾಂಧಿಯಂಥವರಿಂದ ಸ್ವೀಕರಿಸಿದ 'ರಾಜಕೀಯ ನೈತಿಕತೆ'ಯಿತ್ತು.

ಈ ರಾಜಕೀಯ ನೈತಿಕತೆಯನ್ನು ಅವರು ಗಾಂಧಿಯಿಂದ ಪಡೆದುಕೊಂಡಿತು ಎಂದಾಗ ಸ್ಪಷ್ಟವಾಗುವುದೆಂದರೆ, ಅದು ಸಂಪೂರ್ಣವಾಗಿ ನಮ್ಮ ಪರಂಪರೆಯಿಂದಲೇ ಪುನರ್ ರೂಪಿಸಿಕೊಂಡಿದ್ದೆಂದು. ಆದ್ದರಿಂದಲೇ ರಾಜಕೀಯವೆನ್ನುವುದು ಲಂಕೇಶರ ದೃಷ್ಟಿಯಲ್ಲಿ "ಆಳವಾದ ಧ್ಯಾನ ಮತ್ತು ಚಿಂತನೆಗಳಿಂದ ಕೂಡಿದ ಕ್ರಿಯಾಚಟುವಟಿಕೆಯಾಗುತ್ತದೆ. 'ಋಷಿಯಲ್ಲದವನು ಕಾವ್ಯ ರಚಿಸಲಾರ' ಎನ್ನುವ ಮಾತು ಸಂಸ್ಕೃತ ಕಾವ್ಯ ಮೀಮಾಂಸೆಯಲ್ಲಿ ಪ್ರಸಿದ್ಧವಾದದ್ದು. ಇದಕ್ಕೆ ಸಮಾನಾಂತರವಾಗಿ ಅಡಿಗರ 'ಶ್ರೀರಾಮನವಮಿಯ ದಿವಸ' ಕವನದಲ್ಲಿ 'ಹುತ್ತಗಟ್ಟಿದೆ ಚಿತ್ತ ಮತ್ತೆ ಕೆತ್ತಿತೇನು ಪುರುಷೋತ್ತಮನ ಅಂಥ ರೂಪು ರೇಖೆ' ಎಂಬ ಸಾಲಿದೆ. ಈ ಎರಡೂ ಮಾತುಗಳ ಅರ್ಥವಿಷ್ಟೆ. ಕಾವ್ಯ ಹುಟ್ಟುವುದು ಒಂದು ರೀತಿಯ ಧ್ಯಾನ ಮತ್ತು ಕಾಯುವಿಕೆಯಿಂದ. ಲಂಕೇಶರು ರಾಜಕೀಯ ಕೂಡ ಚಿಂತನೆ ಮತ್ತು ಧ್ಯಾನದಿಂದಲೇ ಹುಟ್ಟುವಂಥದ್ದು ಎಂದೇ ಭಾವಿಸುತ್ತಾರೆ. ಅಂದರೆ ಲಂಕೇಶರ ದೃಷ್ಟಿಯಲ್ಲಿ ಕಾವ್ಯ, ರಾಜಕೀಯಗಳೆಲ್ಲವು ಒಂದು ಸಂಸ್ಕೃತಿಯ ಆಳವಾದ ತಿಳುವಳಿಕೆ ಮತ್ತು ಧ್ಯಾನದಿಂದ ರೂಪುಗೊಂಡವು.

ನಾನು ಈ ಮಾತುಗಳನ್ನು ಲಂಭಿಸಿದ್ದು ಲಂಕೇಶರ ಟೀಕೆ ಟಿಪ್ಪಣಿಯ ಲೇಖನಗಳನ್ನು ಕೇವಲ ರಾಜಕೀಯ ಪ್ರತಿಕ್ರಿಯೆಗಳಾಗಿ ಓದಿಕೊಳ್ಳುವುದಕ್ಕಿಂತ ಬೇರೆಯಾಗಿ ನೋಡಬೇಕಾದ ಅಥವಾ ನಿರ್ದಿಷ್ಟವಾಗಿ ಹೇಳುವುದಾದರೆ ಸಂಸ್ಕೃತಿ ವಿಮರ್ಶೆಯ ಬರಹಗಳಾಗಿ ನೋಡಬೇಕಾದ ಅವಶ್ಯಕತೆಯನ್ನು ಮನಗಾಣಿಸಲು.

ಸಂಸ್ಕೃತಿಯನ್ನು ಕುರಿತು ನಮ್ಮ ವಿದ್ವಾಂಸರಲ್ಲಿ ಹಲವು ರೀತಿಯ ಅಭಿಪ್ರಾಯಗಳಿವೆ. ಕೆಲವು ನೈತಿಕ ಆದರ್ಶವಾದಿಗಳು ಸಂಸ್ಕೃತಿಯನ್ನು `ತರುತಳೆದ ಪುಷ್ಪ' ಎನ್ನುವಂತೆ ವ್ಯಾಖ್ಯಾನಿಸಿದ್ದಾರೆ. ಆದರೆ ಕೆಲವರು ಸಮಾಜಶಾಸ್ತ್ರೀಯವಾಗಿ ಸಂಸ್ಕೃತಿಯನ್ನು ವ್ಯಾಖ್ಯಾನಿಸುತ್ತಾ "ಅದು ಸಾಗುವ ದಾರಿಯೆ ಹೊರತು ತಲುಪಿದ ಗುರಿಯಲ್ಲ" ಎನ್ನುವ ಅಭಿಪ್ರಾಯಕ್ಕೆ ಬಂದಿದ್ದಾರೆ. ಮೊದಲನೆ ಗುಂಪಿನ ವಿದ್ವಾಂಸರು ಸಂಸ್ಕೃತಿಯನ್ನು ಆದರ್ಶವಾಗಿ, ಸಂಸ್ಕಾರವಾಗಿ, ಏಕಾಕೃತಿಯಾಗಿ ರಾಜಕೀಯಾತೀತತವೆಂದು ಭಾವಿಸುತ್ತಾರೆ. ಆದರೆ ಎರಡನೆ ಗುಂಪಿನ ವಿದ್ವಾಂಸರು ಅದನ್ನು ವಾಸ್ತವ, ಬಹುಮುಖಿಯಾಗಿ ಭಾವಿಸುತ್ತಾರಲ್ಲದೆ, ರಾಜಕೀಯಾತೀತ ಎಂಬ ನಿಲುವನ್ನು ನಿರಾಕರಿಸುತ್ತಾರೆ.

ಲಂಕೇಶರು ಸಂಸ್ಕೃತಿಯ ಬಗ್ಗೆ ತಾಳುವ ನಿಲುವು ಎರಡನೇ ಗುಂಪಿನ ವಿದ್ವಾಂಸರಿಗೆ ಹತ್ತಿರವಾದದ್ದು. ಸಂಸ್ಕೃತಿಯು ಬಹುಮುಖವಾದದ್ದು ಎಂಬುದನ್ನು ಅವರು ಒಪ್ಪಿಕೊಳ್ಳುತ್ತಾರೆ. ಬಹು ಪ್ರಾಚೀನ ಸಂಸ್ಕೃತಿಯನ್ನು ಹೊಂದಿರುವ ದೇಶದ ಆತ್ಮನಾಶ ಸಾಧ್ಯವಿಲ್ಲಎಂಬುದು ಅವರ ನಿಲುವು. ಬಹುಮುಖಿಯಾಗಿರುವ ಸಂಸ್ಕೃತಿಗಳ ಅಧ್ಯಯನ ಅಥವಾ ತಿಳಿವು ಏಕಮುಖಿ ವಿತರ್ಕಕ್ಕೆ ಪ್ರತಿರೋಧ ತೋರಬಲ್ಲದು. ಒಂದು ಸಂಸ್ಕೃತಿಯ ಒಳಗಡೆ ಕ್ರೌರ್ಯಕ್ಕೆ ಪರ್ಯಾಯ ಅಥವಾ ಪ್ರತಿರೋಧವಿದೆ ಎಂದು ಭಾವಿಸುವುದು ಸಾಂಸ್ಕೃತಿಕ ರಾಜಕಾರಣದ ಬಹುಮುಖ್ಯ ನೆಲೆ. ಹಾಗೆಂದು ಲಂಕೇಶರು ಸಂಸ್ಕೃತಿಯ ವಿಮರ್ಶೆಯನ್ನು ವಿರೋಧಿಸುತ್ತಾರೆಂದಲ್ಲ. ವಿಮರ್ಶೆ ಸರಿಯಾದುದಾದರೂ ಕುರುಡು ವಿರೋಧ ಸರಿಯಲ್ಲ ಎಂಬ ನಂಬಿಕೆ ಲಂಕೇಶರದ್ದು. ಹಾಗೆಯೆ ಕೇವಲ ಐಹಿಕ ಭೋಗದ ಹಿಂದೆ ಬಿದ್ದವರಿಗೆ ಸಂಸ್ಕೃತಿಯ ಭಾವನಾಮಯವಾತಾವರಣ ಅರ್ಥವಾಗುವುದಿಲ್ಲ. ಸಂಸ್ಕೃತಿಯೆನ್ನುವುದು ವಿಚಿತ್ರ ವಿಪರ್ಯಾಸಮಯ ಅನುಭವಗಳಿಂದ ರೂಪುಗೊಳ್ಳುವುದೇ ಹೊರತು ಕೃತಕ ವರ್ತನೆಯಿಂದ ಮೂಡುವುದಲ್ಲ ಎನ್ನುವ ನಂಬಿಕೆಯ ಲಂಕೇಶರು, ಒಬ್ಬ ಮನುಷ್ಯನ ಘನತೆ, ಆತ್ಮಗೌರವಗಳು ರಾಜಕೀಯ ಮತ್ತು ಸಾಂಸ್ಕೃತಿಕ ಪಾಲುದಾರಿಕೆಯೊಂದಿಗೆ ಬೆಸೆದುಕೊಂಡಿವೆ ಎನ್ನುವ ನಿಲುವನ್ನು ಪ್ರತಿಪಾದಿಸುತ್ತಾರೆ.

ಒಬ್ಬ ಮನುಷ್ಯನ ಘನತೆ ಆತ್ಮಗೌರವಗಳು ಸಾಂಸ್ಕೃತಿಕ ಮತ್ತು ರಾಜಕೀಯ ಪಾಲುದಾರಿಕೆಯೊಂದಿಗೆ ಬೆಸೆದುಕೊಂಡಿವೆ ಎಂದು ಭಾವಿಸುವುದರಿಂದಲೇ ಲಂಕೇಶರಿಗೆ ಭಾರತೀಯ ಜಾತಿ ವ್ಯವಸ್ಥೆಯು ಕ್ರೂರವಾಗಿ ಕಂಡಿದೆ. ಸಮಾಜದ ಬಹುಮುಖಿ ಸಂಸ್ಕೃತಿಯ ಬಗ್ಗೆ ಹೆಮ್ಮೆ ತಾಳುತ್ತಲೇ ಇದರೊಳಗೆ ಇರಬಹುದಾದ ಕ್ರೌರ್ಯವನ್ನು ಸಹ ಅವರು ಗುರುತಿಸಿದ್ದಾರೆ. ಜಾತಿ, ಧರ್ಮ, ಸಮಾಜ, ರಾಜಕೀಯಗಳನ್ನೆಲ್ಲ ಒಳಗೊಂಡದ್ದೆ ಸಂಸ್ಕೃತಿ ಎನ್ನುವ ನೆಲೆ ಲಂಕೇಶರಗಿದೆ. ಆತ್ಮಗೌರವವನ್ನು ಕೊಡುವಾಗ ಸಂಸ್ಕೃತಿಯ ಜೀವದಾಯಕ ಗುಣವನ್ನು ಕಾಣುವ ಅವರು, ಜಾತಿ ಧರ್ಮಗಳೇ ಅವರ ನಿಯಂತ್ರಕ ಶಕ್ತಿಗಳಾದಾಗ ಅದರ ಜೀವ ಮಾರಕ ಗುಣವನ್ನು ಸಹ ಗುರುತಿಸಿದ್ದಾರೆ.

ಭಾರತದ ರಾಜಕೀಯ ಸಂಸ್ಕೃತಿಯನ್ನು ಒಂದು ರೀತಿಯ 'ವಾಚಿವೀರ್ಯ ರಾಜಕೀಯ ವ್ಯವಸ್ಥೆ ಎಂದೇ ಲಂಕೇಶರು ಪ್ರತಿಪಾದಿಸಿದ್ದಾರೆ. ಗ್ರಾಮ ಪಂಚಾಯ್ತಿಯ ಮಟ್ಟದಲ್ಲಿ ಹೇಗೆ ಹಣ ಮತ್ತು ಜಾತಿ ನಿರ್ಣಾಯಕ ಶಕ್ತಿಗಳಾಗಿ ಕಾರ್ಯ ನಿರ್ವಹಿಸುತ್ತಿವೆಯೋ ಹಾಗೆಯೆ ಭಾರತದ ಸಂಸತ್ತನ್ನು ಕೂಡ ಈ ಶಕ್ತಿಗಳೇ ನಿಯಂತ್ರಿಸುತ್ತಿವೆ. ಇಂಥ ವಿಷಾದದಗಳಿಗೆಯಲ್ಲಿ ಸ್ವಲ್ಪವಾದರೂ ಬದಲಾವಣೆಯಗಬೇಕೆಂದರೆ, ಜಾತಿ ಶ್ರೇಣಿಕರಣದಲ್ಲಿ ಇಲ್ಲಿಯವರೆಗೆ ಕೆಳಹಂತದಲ್ಲಿ ಶೋಷಣೆಗೆ ಗುರಿಯಾಗಿದ್ದ 'ದಲಿತನೊಬ್ಬ' ರಾಷ್ಟ್ರದ ಅತ್ಯುನ್ನತ ಪದವಿಗೇರಬೇಕು ಎಂಬ ನಿಲುವನ್ನು ಹೇಳುತ್ತಾರೆ. ಒಬ್ಬ ದಲಿತ ಮಾತ್ರ ತನ್ನ ಸಾಂಸ್ಕೃತಿಕ ವ್ಯಕ್ತಿತ್ವದಿಂದ ಹಿಂದಿನ ಎಲ್ಲಾ ಅನ್ಯಾಯಗಳನ್ನು ಸರಿಪಡಿಸಿ ರಾಜಕೀಯ ಸಂಸ್ಕೃತಿಗೆ ಅದಮ್ಯ ಚೈತನ್ಯ ತುಂಬುತ್ತಾನೆ ಎಂಬ ನಂಬಿಕೆ ಲಂಕೇಶರಿಗಿದೆ.

"ಅಧಿಕಾರಕ್ಕಾಗಿ ಅಧಿಕಾರ ಹಣಕ್ಕಾಗಿ ಹಣ' ಎನ್ನುವ ಐಹಿಕ ಭೋಗ ಸಂಸ್ಕೃತಿಗೆ ಬೆನ್ನು ಹತ್ತುವ ಮನೋಭಾವವೇ ಇಂದಿನ ಪಕ್ಷಾಂತರಕ್ಕೆ ಮುಖ್ಯ ಕಾರಣ ಎಂಬುದು ಲಂಕೇಶರ ತರ್ಕ. ನಾನು ಮೊದಲೇ ಹೇಳಿದಂತೆ ಲಂಕೇಶರ ಇಂಥ ಹೇಳಿಕೆಯ ಹಿಂದೆ ಇರುವುದು 'ರಾಜಕೀಯ ನೈತಿಕತೆಯ ಕಲ್ಪನೆ. ಆದ್ದರಿಂದಲೇ ಪಕ್ಷಾಂತರವೆಂದರೆ ಅವರ ದೃಷ್ಟಿಯಲ್ಲಿ ವ್ಯಭಿಚಾರವೆಂದೇ ಅರ್ಥ. ಹೀಗೆ ಹಣ, ಅಧಿಕಾರದ ಹಿಂದೆ ಬಿದ್ದ ವ್ಯಭಿಚಾರಿಗಳಿಗಿಂತ, ಅಧಿಕಾರ ಹಿಡಿಯದೆಯೂ ದೇಶವನ್ನು ಕಟ್ಟಬಲ್ಲ ಗಾಂಧಿ ಮತ್ತು ಸರ್ವೋದಯದ ನಾಯಕ ಜಯಪ್ರಕಾಶ ನಾರಾಯಣರು ಅವರಿಗೆ ಮುಖ್ಯರಾಗುತ್ತಾರೆ. ಈ ರಾಜಕೀಯ ನೈತಿಕತೆಯ ಕಲ್ಪನೆಯ ಹಿನ್ನೆಲೆಯಲ್ಲಿಯೆ ಲಂಕೇಶರು ಮಧ್ಯಮ ವರ್ಗದ ಮೇಲೆ ಹೊಂದಿದ್ದ ಪ್ರೀತಿಯನ್ನು ಅರ್ಥಮಾಡಿಕೊಳ್ಳಬೇಕು. ಈ ಮಧ್ಯಮ ವರ್ಗವನ್ನು ನೋಡುವ ವಿಚಾರದಲ್ಲಿ ಲಂಕೇಶರದು ನಂದಿಯವರಿಗಿಂತ ಭಿನ್ನವಾದ ದೃಷ್ಟಿಕೋನ. ನಂದಿ ತನ್ನನ್ನು ಒಬ್ಬ ಮಧ್ಯಮವರ್ಗದ ಕಥನಕಾರ ಎಂದು ಕರೆದುಕೊಳ್ಳುತ್ತಾ ಆ ವರ್ಗದ ಆಸೆ ನಿರಾಸೆಗಳ ಕಥೆಯನ್ನು ಹೇಳುತ್ತಾ ಹೋಗುತ್ತಾರೆ. ಆದರೆ ಲಂಕೇಶರು ಇದಕ್ಕಿಂತ ಭಿನ್ನ. ಅವರು ಮಧ್ಯಮವರ್ಗವನ್ನು ಮೆಚ್ಚುವುದು ಅದು ಸಂಸ್ಕೃತಿಯ ಸಂಚಾಲಕ ಶಕ್ತಿ ಎಂದು. ಭ್ರಮಾಲೋಕದಲ್ಲಿ ವಿಹರಿಸುವ ಮೇಲುವರ್ಗವಾಗಲಿ, ತೀವ್ರ ವಾಸ್ತವಕ್ಕೆ ಬಿದ್ದು ಅನೇಕ ಸಮಸ್ಯೆಗಳಿಂದ ಸುತ್ತುವರಿಯಲ್ಪಟ್ಟಿರುವ ಕೆಳವರ್ಗದವರಾಗಲಿ ಸಂಸ್ಕೃತಿಯ ಸಂಚಾಲಕರಾಗುವುದಿಲ್ಲ. ಈ ಎರಡರ ಮಧ್ಯೆ ಇರುವ ಮಧ್ಯಮವರ್ಗ ಮಾತ್ರ ಸಂಸ್ಕೃತಿಯನ್ನು ಅದರೆಲ್ಲಾ ಸಂಕೀರ್ಣತೆಯೊಂದಿಗೆ ಕಾಪಾಡಿಕೊಳ್ಳುತ್ತಾರೆ. ಆದ್ದರಿಂದಲೇ ಲಂಕೇಶರು ಮಾಧ್ಯಮವರ್ಗದವನ್ನು 'ಸಂಪನ್ನರ ಗುಂಪು' ಎಂದೇ ಕರೆಯುತ್ತಾರೆ.

ಒಂದು ಕಡೆ ಜಾಗತೀಕರಣ ಪ್ರತಿಪಾದಿಸುತ್ತಿರುವ ಗ್ರಾಹಕ ಸಂಸ್ಕೃತಿ. ಇನ್ನೊಂದು ಕಡೆ ಮತೀಯ ಶಕ್ತಿಗಳು ಪ್ರತಿಪಾದಿಸುತ್ತಿರುವ ಫ್ಯಾಸಿಸ್ಟ್ ಸಂಸ್ಕೃತಿಗಳ ಒತ್ತಡದಲ್ಲಿ ಲಂಕೇಶರು ಪ್ರತಿಪಾದಿಸುವ ಬಹುಮುಖಿ ಸಂಸ್ಕೃತಿಯ ಒಲವು ಮುಖ್ಯವಾದದ್ದಾಗಿದೆ. ದೇಶದ ಸಾಮಾಜಿಕ, ಆರ್ಥಿಕ ಪ್ರಗತಿಗೂ ಧಾರ್ಮಿಕ ಸಾಮರಸ್ಯಕ್ಕೂ ಆಳವಾದ ಸಂಬಂಧವಿದೆ ಎಂಬುದು ಲಂಕೇಶರ

ಅಭಿಪ್ರಾಯ. ಆದ್ದರಿಂದಲೇ ಧಾರ್ಮಿಕ ಸಾಮರಸ್ಯ ಎನ್ನುವುದು ಕೇವಲ ಬುದ್ಧಿಜೀವಿಯೊಬ್ಬನ ಒಳಗಿನ ತುಡಿತ ಮಾತ್ರವಲ್ಲ. ಅದು ದೇಶದ ಅಭಿವೃದ್ಧಿಗೆ ಅನಿವಾರ್ಯ ಸಂಗತಿ ಎಂದು ಭಾವಿಸುತ್ತಾರೆ. ಪ್ರತಿಮೆ, ಸಂಕೇತಗಳನ್ನು ನಿಟವೆಂದು, ಅಥವಾ ಚರಿತ್ರೆಯೆಂದು ಭಾವಿಸುವ ಕ್ರಮವನ್ನು ಅವರು ವಿರೋಧಿಸುತ್ತಾರೆ. ಇತಿಹಾಸದಿಂದ ಮತ್ಸರ, ದ್ವೇಷಗಳನ್ನು ಪಡೆಯುವ ಮಂದಿ ವರ್ತಮಾನದಲ್ಲಿ ನಶಿಸಿಹೋಗುತ್ತಾರೆ ಎನ್ನುವ ನಿಲುವು ಲಂಕೇಶರದ್ದು.

ಹಾಗೆಂದ ಮಾತ್ರಕ್ಕೆ ಲಂಕೇಶರು ಧರ್ಮವನ್ನು ತಿರಸ್ಕರಿಸುವುದಿಲ್ಲ. ಅವರ ಚಿಂತನೆಯಲ್ಲಿ ಮೊದಲಿನಿಂದಲೂ ಧರ್ಮವನ್ನು ಕುರಿತು ಪುರಸ್ಕಾರ ಮತ್ತು ತಿರಸ್ಕಾರದ ನೆಲೆಗಳೆರಡೂ ಪ್ರವೃತ್ತವಾಗಿವೆ. ಧರ್ಮಕ್ಕೆ ತಾತ್ವಿಕ ಮತ್ತು ವಾಸ್ತವ ಎಂಬ ಎರಡು ಮುಖಗಳಿವೆ. ಅದರ ತಾತ್ವಿಕ ಮುಖವು ಸೃಜನಶೀಲವಾದುದು. ಅದು ಕ್ರಿಯಾಶೀಲವಾದಾಗ ರಾಮಾಯಣ, ಮಹಾಭಾರತಗಳಂಥ ಮಹಾಕಾವ್ಯಗಳು ಹುಟ್ಟುತ್ತವೆ. ಹಾಗಾಗಿಯೇ ಧರ್ಮದ ತಾತ್ವಿಕ ಮುಖವು ಲಂಕೇಶರ ಚಿಂತನೆಯಲ್ಲಿ ಪುರಸ್ಕಾರ ಪಡೆಯುತ್ತದೆ. ಆದರೆ ವಾಸ್ತವ ಮುಖ ವಿಚ್ಛಿದ್ರಕಾರಕವಾದದ್ದು. ಹಾಗಾಗಿಯೇ ಅದು ತಿರಸ್ಕಾರಕ್ಕೆ ಗುರಿಯಾಗುತ್ತದೆ. ಈ ವಾಸ್ತವ ಮುಖವನ್ನು ಹೊರತುಪಡಿಸಿ ಎಲ್ಲಾ ಧರ್ಮಗಳಲ್ಲೂ ಸಮಾನವಾಗಿರುವ ಧರ್ಮದ ಮೂಲ ಬೇರುಗಳಾದ ದಯೆ, ಆತ್ಮಸಂಯಮಕ್ಕೆ ಒತ್ತು ಹಾಕಿ ಜಾತೀಯತೆಯನ್ನು ನಿರಾಕರಿಸಿದಾಗ ಮಾತ್ರ ಸಾಮರಸ್ಯ ಸಾಧ್ಯ ಎಂಬುದು ಲಂಕೇಶರ ಅಭಿಪ್ರಾಯ. ಇದಕ್ಕೆ ಅವರಿಗೆ ಗಾಂಧೀ ತತ್ವಗಳು ಸ್ಫೂರ್ತಿಯಾಗಿವೆ.

ಬುದ್ಧಿಜೀವಿಯೊಬ್ಬನು ವಿಶಿಷ್ಟ ಕಾಲಘಟ್ಟದಲ್ಲಿ ಯಾವ ಕಡೆ ನಿಲ್ಲಬೇಕು ಎಂಬ ಪ್ರಶ್ನೆ ಲಂಕೇಶರನ್ನು ಪದೇ ಪದೇ ಕಾಡಿದೆ. ಅದಕ್ಕೆ ಅವರು ಕಂಡುಕೊಂಡ ಉತ್ತರ ವಿಶಿಷ್ಟವಾದದ್ದು. ಜಾತಿಗಳ ಸಂಘರ್ಷ ಏರ್ಪಡದಂತೆ ಇರಬೇಕಾದರೆ ಯಾವ ರೀತಿಯ ವಾತಾವರಣ ನಿರ್ಮಿಸಬೇಕು ಎಂಬುದು ಅವರು ಕೇಳಿಕೊಳ್ಳುವ ಪ್ರಶ್ನೆಯಾಗಿದೆ. ಜೊತೆಗೆ ಜಾತಿ ಉಪಜಾತಿಗಳನ್ನು ನಂಬಿದ ದೇಶಗಳು ಇಂದು ವಿನಾಶದ ಅಂಚಿನಲ್ಲಿವೆ ಎಂಬುದನ್ನು ಹೇಳುತ್ತಾ, ಬುದ್ಧಿ ಜೀವಿಯೊಬ್ಬನು ಭಿನ್ನ ಧರ್ಮೀಯರ ನಡುವೆ ಇರುವ ಸಂದೇಹದ ಗೋಡೆಯನ್ನು ಒಡೆಯುವವನಾಗಿರಬೇಕು ಎನ್ನುತ್ತಾರೆ.

ಲಂಕೇಶರ ಚಿಂತನೆಯು ವಿಕಸನಶೀಲ ವಿಮರ್ಶಾ ಗುಣವನ್ನು ಹೊಂದಿದೆ. ಹಾಗಾಗಿಯೇ ರೈತಸಂಘಗಳ ಬಗ್ಗೆ ಒಳ್ಳೆಯ ಅಭಿಪ್ರಾಯವಿದ್ದೂ ಅದನ್ನು ವಿಮರ್ಶೆಗೆ ಒಳಪಡಿಸಿದ್ದಾರೆ. ರೈತ ಸಂಘಗಳನ್ನು ಅವರು ಮೆಚ್ಚುವುದು ರೈತ ಸಂಘಗಳು ಮೊದಲಿಗೆ ರೈತರ ಸಮಸ್ಯೆಯನ್ನು ಆರ್ಥಿಕ ಸಂದರ್ಭದಲ್ಲಿಟ್ಟು ವಿಶ್ಲೇಷಿಸಿದ್ದಕ್ಕಾಗಿ. ಆದರೆ ಲಂಕೇಶರ ವಿಷಾದವೆಂದರೆ ಅವುಗಳು ಗ್ರಾಮೀಣ ಪ್ರದೇಶದ ರಾಜಕೀಯ ಮುಖಾಮುಖಿಯನ್ನು ಬದಲಾಯಿಸಲಿಲ್ಲ. ಕರ್ನಾಟಕದ ಬಹುಪಾಲು ಭೂಸ್ವಾಮ್ಯಹೊಂದಿರುವವರು ಮೇಲು ಜಾತಿಗಳವರೆ ಎಂಬುದು ರಹಸ್ಯವೇನಲ್ಲ.

ಸಹಜವಾಗಿಯೇ ರೈತಸಂಘದ ಸಂಘಟನೆಯ ಮುಂದಾಳುಗಳು ಇಂಥವರೇ ಆಗಿದ್ದರು. ಇದರಿಂದಾಗಿ ಹಳ್ಳಿಯ ದಲಿತ, ಹಿಂದುಳಿದವರ ಬದುಕು ಯಥಾಸ್ಥಿತಿಯಲ್ಲಿಯೆ ಮುಂದುವರಿಯಿತು. ರೈತ ಸಂಘಗಳು ಗ್ರಾಮದ ರಾಜಕೀಯ ಮುಖಾಮುಖಿಯನ್ನು ಬದಲಿಸದ ಹೊರತು ಒಂದು ರಾಜಕೀಯ ಸಂಘಟನೆಯಾಗಿ ಅಧಿಕಾರ ಪಡೆಯಲಾರದು ಎಂಬುದು ಲಂಕೇಶರ ನಿಲುವು. ಜೊತೆಗೆ ಶೂದ್ರ, ದಲಿತರ ಸಮಸ್ಯೆಗಳು ಕೇವಲ ಅವರವು ಮಾತ್ರವಲ್ಲ. ಅವು ಇಡೀ ಸಮಾಜದ ಸಮಸ್ಯೆಗಳು ಎಂಬ ಚಿಂತನೆ ಮೂಡಿದಾಗ ಮಾತ್ರ ರೈತ ಸಂಘಗಳ ಚಳುವಳಿಗೆ ಹೊಸ ಅರ್ಥಸಾಧ್ಯ ಎಂಬುದು ಲಂಕೇಶರ ನಿಲುವು.

ಲಂಕೇಶರನ್ನು ಕಾಡುವ ಇನ್ನೊಂದು ಬಹುಮುಖ್ಯ ಸಮಸ್ಯೆಯೆಂದರೆ ಜಮೀನ್ದಾರಿಕೆ ಮತ್ತು ಅಧಿಕಾರದ ಸಂಬಂಧ. ಸ್ವತಂತ್ರ್ಯ ನಂತರವು ಭಾರತದ ರಾಜಕೀಯ ವ್ಯವಸ್ಥೆಯು ಜಮೀನ್ದಾರರ ಹಿಡಿತದಲ್ಲಿರುವುದು. ಆ ಕಾರಣದಿಂದಾಗಿಯೆ ಇಂದಿಗೂ ದಲಿತರ ಮೇಲಿನ ಹಲ್ಲೆ ಶೋಷಣೆಗಳು ಯಥಾವತ್ತಾಗಿ ಮುಂದುವರಿಯುತ್ತಿವೆ. ಈ ಸ್ಥಿತಿ ಮುಂದುವರಿದರೆ ಕೆಳವರ್ಗಗಳಿಗೆ ಸ್ವತಂತ್ರ್ಯದ ಅನುಭವವೇ ಉಂಟಾಗುವುದಿಲ್ಲ ಎಂಬುದು ಲಂಕೇಶರ ನಿಲುವು. ಭಾರತದಂಥ ಬಹುಮುಖಿ ಸಂಸ್ಕೃತಿಯ ದೇಶದಲ್ಲಿ ಆಡಳಿತ ವಿಕೇಂದ್ರೀಕರಣದ ಜೊತೆಗೆ, ಆರ್ಥಿಕ ವಿಕೇಂದ್ರಿಕರಣವು ಆದಾಗ ಮಾತ್ರ ಈ ದೇಶದ ಅನೇಕ ರಾಜ್ಯಗಳು ಪ್ರತಿಸ್ಪರ್ಧಿಯಾಗದೆ ಸಹಕಾರಿಗಳಾಗಿ ಬೆಳೆಯುತ್ತವೆ. ಭಾಷೆ, ಸಂಸ್ಕೃತಿಗಳು ಉಳಿಯುತ್ತವೆ ಎಂಬ ನಿಲುವು ಲಂಕೇಶರದು.

ಮೀಸಲಾತಿಯನ್ನು ಸಮರ್ಥಿಸುವುದಾಗಲಿ, ಕಾಯಕನಿಷ್ಠೆಯನ್ನು ಹೇಳುವಾಗಲಿ, ರಾಜಕೀಯ ನೈತಿಕತೆಯ ವಿಚಾರವಿರಲಿ, ಅಥವಾ ಮೂಲಭೂತವಾದಕ್ಕೆ ಪರ್ಯಾಯವನ್ನು ಹೇಳಲಿ ಲಂಕೇಶರು ಅನುಸಂಧಾನ ಮಾಡುವುದು ಗಾಂಧಿಯನ್ನು. ಲಂಕೇಶರು ನಮ್ಮ ಸಾಂಸ್ಕೃತಿಕ ವ್ಯವಸ್ಥೆಯನ್ನು ವಿಡಂಬಿಸಿದ್ದಾರೆ ಎನ್ನುವುದು ನಿಜ. ಆದರೆ ಆ ವಿಡಂಬನೆ ಭಂಜನೆಯ ಜೊತೆಗೆ ಚಿಕಿತ್ಸಕ ರಚನೆಯನ್ನು ಒಳಗೊಂಡಿದೆ. ಅವರ ಒಟ್ಟಾರೆ ರಾಜಕೀಯ ಸಾಂಸ್ಕೃತಿಕ ಚಿಂತನೆಯನ್ನು 'ಪರ್ಯಾಯ ಚಿಂತನೆ ಎಂದು ನೋಡಬೇಕಾದ ಅಗತ್ಯವಿದೆ. ಮೇಲೆ ಹೇಳಿದಂತೆ ಗಾಂಧಿ ಅವರಿಗೆ ಕಂಡ ಒಂದು ಪರ್ಯಾಯವಾದರೆ, ಇನ್ನೊಂದೆಡೆ ಜಗಜೀವನರಾಮ್, ಬಸವಣ್ಣ, ಮಾರ್ಕ್ಸ್, ಪುಕುವೋಕ, ಹೀಗೆ ಎಷ್ಟೋ ಜನರ ಚಿಂತನೆಗಳು ಅವರ ಬರಹಗಳಲ್ಲಿ ಪರ್ಯಾಯವಾಗಿ ಮಂಡಿತವಾಗಿವೆ.

# ಪರಾಮರ್ಶನ ಗ್ರಂಥಗಳು


೧. ಟೀಕೆ–ಟಿಪ್ಪಣಿ ಸಂಪುಟ–೧ : ಲಂಕೇಶ್ ಪಿ.

೨. ಟೀಕೆ–ಟಿಪ್ಪಣಿ ಸಂಪುಟ–೨ : ಲಂಕೇಶ್ ಪಿ.

೩. ಕಂಡದ್ದು ಕಂಡ ಹಾಗೆ : ಲಂಕೇಶ್ ಪಿ.

೪. ಸಂಸ್ಕೃತಿ : ಡಿ.ವಿ.ಜಿ.

೫. ಪ್ರತಿ ಸಂಸ್ಕೃತಿ : ರಹಮತ್ ತರೀಕೆರೆ

೬. ಮರದೊಳಣಗಳ ಕಿಚ್ಚು : ರಹಮತ್ ತರೀಕೆರೆ

೭. ಸಾಂಸ್ಕೃತಿಕ ಅಧ್ಯಯನ : ರಹಮತ್ ತರೀಕೆರೆ

೮. ಬೋದಿಲೇರನ ಸಖ : ರಾಘವೇಂದ್ರ ಪಾಟೀಲ

೯. ತಲೆಮಾರಿನ ತಳಮಳ : ಗಂಗಾಧರ ಕುಷ್ಟಗಿ

೧೦. ಅಕ್ಷರ ಹೊಸ ಕಾವ್ಯ : ಲಂಕೇಶ್ ಪಿ.

